# ಬ್ಯಾಂಕಿಂಗ್ ಪ್ರಪಂಚ

೬ ೧೦ ೮೮

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೯
ಸಂಚಿಕೆ ೨

ಜೂನ್
೧೯೮೮

ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಂಪುಟ ೬ ಜೂನ್ ೧೯೮೮ ಸಂಚಿಕೆ ೨



## ಲೇಖಕರಿಗೆ ಸೂಚನೆಗಳು

'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟಣೆಗಾಗಿ ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧದ ವಿಷಯಗಳನ್ನು ಕುರಿತ ಲೇಖನಗಳಿಗೆ ಸ್ವಾಗತವಿದೆ.

ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೇ ಅನುವಾದಗಳಾಗಿರಬಹುದು. ಲೇಖನ ಅನುವಾದವಾಗಿದ್ದರೆ ಮೂಲ ಲೇಖನದ ಶೀರ್ಷಿಕೆ, ಮೂಲ ಲೇಖಕರ ಹೆಸರು ಮತ್ತು ವಿಳಾಸ, ಮೂಲ ಲೇಖನ ಪ್ರಕಟವಾಗಿದ್ದರೆ ಆ ಬಗ್ಗೆ ವಿವರಗಳು ಇವನ್ನೂ, ಅನುವಾದ ಮಾಡಿ ಪ್ರಕಟಿಸಲು ಮೂಲ ಲೇಖಕರ ಅನುಮತಿಯನ್ನೂ ಅನುವಾದದೊಂದಿಗೆ ಕಳುಹಿಸಿಕೊಡಬೇಕು.

ಲೇಖಕರು ಲೇಖನವನ್ನು ಕಾಗದದ ಒಂದೇ ಮಗ್ಗಲಿನಲ್ಲಿ ಸ್ಫುಟವಾಗಿ ಬರೆದಿರಬೇಕು. ಪುಟದ ಎಡಬದಿಯಲ್ಲಿ ಸಾಕಷ್ಟು ಅಂಚು ಬಿಟ್ಟಿರಬೇಕು. ಒಂದು ಸಾಲಿಗೂ ಇನ್ನೊಂದು ಸಾಲಿಗೂ ನಡುವೆ ಧಾರಾಳವಾಗಿ ಸ್ಥಳ ಬಿಟ್ಟಿರಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನೂ ತಮ್ಮ ಸಂಕ್ಷಿಪ್ತ ಪರಿಚಯವನ್ನೂ ಲೇಖನದೊಂದಿಗೆ ಕಳುಹಿಸಿಕೊಡಬೇಕು. ಈ ವಿವರಗಳಿಲ್ಲದ ಲೇಖನಗಳನ್ನು ಪ್ರಕಟಿಸಲಾಗುವುದಿಲ್ಲ.

ಲೇಖನವನ್ನು ಪ್ರಕಟಿಸುವ ಅಥವಾ ಬಿಡುವ, ಯುಕ್ತವೆನಿಸಿದ ಮಾರ್ಪಾಟು ಮಾಡಿ ಪ್ರಕಟಿಸುವ ಅಧಿಕಾರ ಸಂಪಾದಕರಿಗುಂಟು.

ಪ್ರಕಟವಾಗದ ಲೇಖನಗಳನ್ನು ಹಿಂದಿರುಗಿಸಲು ವ್ಯವಸ್ಥೆಯಿಲ್ಲ. ಲೇಖಕರು ಪ್ರಕಟನೆಗಾಗಿ ಕಳುಹಿಸುವ ಲೇಖನದ ಪ್ರತಿಯೊಂದನ್ನು ತಮ್ಮ ಬಳಿ ಇಟ್ಟುಕೊಳ್ಳುವುದು ಒಳ್ಳೆಯದು.

ಬ್ಯಾಂಕಿಂಗ್ ಪ್ರಪಂಚದಲ್ಲಿ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ಅದರ ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕು.

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ಅಭಿಪ್ರಾಯಗಳನ್ನು ಪ್ರಕಟನೆಗಾಗಿ ಬರೆದು ಕಳುಹಿಸಬಹುದು. ಇವು ಸಣ್ಣವಾಗಿರಬೇಕು. ಅಭಿಪ್ರಾಯಗಳೊಂದಿಗೆ ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಬರೆದಿರಬೇಕು.

ಈ ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯಗಳು ಆಯಾ ಲೇಖಕರವು. ಇವನ್ನು ಸಂಪಾದಕರಾಗಲಿ ಪ್ರಕಾಶಕರಾಗಲಿ ಒಪ್ಪಿರುತ್ತಾರೆ ಎಂದೇನೂ ಅಲ್ಲ.

# 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು

(ಮಾರ್ಚ್ ಸಂಚಿಕೆಯಿಂದ ಮುಂದುವರಿದ ಪಟ್ಟಿ)

೫೮೮ ಪ್ರಭಾಕರ
೫೮೯ ಜಯರಾಮಶೆಟ್ಟಿ
೫೯೦ ಸಿ. ಎಸ್. ಪುಟ್ಟಪ್ಪರಾವ್
೫೯೧ ಎಸ್. ವಿ. ಕಶ್ಯಪ್
೫೯೨ ಎಚ್. ರಂಗನಾಥ್
೫೯೩ ಹ. ನ. ಸೋಮಸುಂದರ
೫೯೪ ಎಸ್. ಆರ್. ಪಾಂಡುರಂಗ
೫೯೫ ಪಿ. ಎಸ್. ಪ್ರಾಣೇಶ
೫೯೬ ಭಾರತೀಯ ಸ್ಟೇಟ್ ಬ್ಯಾಂಕ್ ಮಾದನ ಹಿಪ್ಪರಗಿ ಶಾಖೆ
೫೯೭ ಕನ್ನಡ ವಿಭಾಗ, ಮೈಸೂರು ಬ್ಯಾಂಕ್, ಪ್ರಧಾನ ಕಛೇರಿ
೫೯೮ ಮೈಸೂರು ಬ್ಯಾಂಕ್ ಕನ್ನಡ ಬಳಗ, ಮೈಸೂರು
೫೯೯ ಎಸ್. ಟಿ. ಗೋವಿಂದರಾವ್
೬೦೦ ಗಿರಿಧರ ಕಾರ್ಕಳ

**ಮೈಸೂರು ಬ್ಯಾಂಕಿನ ಈ ಮುಂದಿನ ಶಾಖೆಗಳು :**

೬೦೧ ಗುಬ್ಬಿ
೬೦೨ ಕೃಷಿ ಅಭಿವೃದ್ಧಿ ಶಾಖೆ, ಮಾರನಗೆರೆ
೬೦೩ ಬಿ. ಆರ್. ಪ್ರಾಜೆಕ್ಟ್
೬೦೪ ಹೊಳಲು (ಮಂಡ್ಯ ಜಿಲ್ಲೆ)
೬೦೫ ರಬಕವಿ
೬೦೬ ಮಾಚೇನಹಳ್ಳಿ
೬೦೭ ತಿಪಟೂರು
೬೦೮ ಬೀದರ್
೬೦೯ ರಿಚ್‌ಮಂಡ್ ರಸ್ತೆ
೬೧೦ ಕಾರವಾರ
೬೧೧ ಪೇಪರ್‌ಟೌನ್ (ಭದ್ರಾವತಿ)
೬೧೨ ಹಳ್ಳಿ ಮೈಸೂರು
೬೧೩ ಶಕ್ತಿನಗರ
೬೧೪ ಮೇಗರವಳ್ಳಿ
೬೧೫ ವೈಟ್‌ಫೀಲ್ಡ್
೬೧೬ ಕನ್ನಿಂಗ್‌ಹ್ಯಾಂ ರಸ್ತೆ
೬೧೭ ಉಣಕಲ್
೬೧೮ ಸಾಗರ
೬೧೯ ಹಾಸನ
೬೨೦ ಕೊಪ್ಪ
೬೨೧ ಪೋರ್ಟ್ ಶಾಖೆ (ಬೆಂಗಳೂರು)
೬೨೨ ಮಲ್ಲೇಶ್ವರಂ
೬೨೩ ಚಳ್ಳಕೆರೆ
೬೨೪ ಸೌತ್ ಪೆರೇಡ್
೬೨೫ ಟಾಟಾ ಸಿಲ್ಕ್ ಫಾರಂ
೬೨೬ ಶಿವಸಮುದ್ರಂ
೬೨೭ ಹೊಳಲು (ಬಳ್ಳಾರಿ ಜಿಲ್ಲೆ)
೬೨೮ ಹೊಂಗನೂರು
೬೨೯ ಹೊಸನಗರ
೬೩೦ ತುರುವೇಕೆರೆ
೬೩೧ ನಾಗರಭಾವಿ
೬೩೨ ಮಂಡಿ ಮೊಹಲ್ಲ
೬೩೩ ಕಾಳಮುದ್ದನ ದೊಡ್ಡಿ
೬೩೪ ಗಂಡಸಿ
೬೩೫ ಗೂಳೂರು
೬೩೬ ಕನಕಪುರ
೬೩೭ ತೀರ್ಥಹಳ್ಳಿ

ಆಜೀವ ಚಂದಾ ರೂ. ೧೫೦-೦೦. "ಸಮನ್ವಯ ಸಮಿತಿ"ಯ ಹೆಸರಿಗೆ ಚೆಕ್ಕು/ಡ್ರಾಫ್ಟುಗಳನ್ನು ಬರೆಯಬೇಕು.

# ಅಪ್ರಾಪ್ತ ವಯಸ್ಕನ ಖಾತೆ ಮತ್ತು ಬ್ಯಾಂಕ್

**ಅಪ್ರಾಪ್ತ ವಯಸ್ಕನೊಂದಿಗಿನ ವ್ಯವಹಾರ ಅಪಾಯಕರ. ಕಿರಿಯನ ಖಾತೆ ಕಿರಿಕಿರಿಯದು. ಆದರೂ ಅಂಥ ಖಾತೆ ಲಾಭಕರ. ಅಪ್ರಾಪ್ತನ ಖಾತೆಯ ಮೇಲೆ ಆಸೆ, ಗಂಟಿನ ಮೇಲೆ ಪ್ರೀತಿ. ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ ?**

**ಕೆ. ಎನ್. ಮಹಾಬಲ**

**ಭಾರತೀಯ ಸ್ಟೇಟ್ ಬ್ಯಾಂಕ್**
**ಬನಶಂಕರಿ ಶಾಖೆ, ಬೆಂಗಳೂರು**

ಠೇವಣಿ ಸಂಗ್ರಹಣೆಯ ವಿಷಯದಲ್ಲಿ ಅಪ್ರಾಪ್ತ ವಯಸ್ಸಿನ ಕಿರಿಯ ಗ್ರಾಹಕ ಎಂದೂ ಬ್ಯಾಂಕರನ ಮುದ್ದಿನ ಮಗುವೇ. ಬ್ಯಾಂಕಿಗೆ ಯಾರಾದರೂ ಒಬ್ಬರು ಗ್ರಾಹಕರು ಬಂದು, 'ಕಳೆದ ತಿಂಗಳು ಹುಟ್ಟಿದ ನನ್ನ ಮಗುವಿನ ಹೆಸರಿನಲ್ಲಿ ನನ್ನ ಸಂಪಾದನೆಯ ಒಂದು ಭಾಗವನ್ನು ಉಳಿತಾಯ ಮಾಡುತ್ತೇನೆ' ಎಂದೋ, ವಯಸ್ಸಾದ ಮಹಿಳೆಯೊಬ್ಬರು ತಮ್ಮ ಪ್ರೀತಿಪಾತ್ರ ಮೊಮ್ಮಗನ ಹೆಸರಿನಲ್ಲಿ 'ನನ್ನ ಉಳಿತಾಯವೆಲ್ಲವನ್ನೂ ತೊಡಗಿಸುತ್ತೇನೆ, ಅವನು ವಯಸ್ಕನಾದಾಗ ಮೊತ್ತ ಅವನಿಗೆ ಸೇರಬೇಕು. ಅಲ್ಲಿಯವರೆಗೂ ಅದು ನನ್ನ ಸ್ವಾಮ್ಯದಲ್ಲೇ ಇರಬೇಕು' ಎಂದೋ ಸಲಹೆ ಬಯಸಿ ಬಂದರೆ ಯಾವ ಬ್ಯಾಂಕರ್ ತಾನೇ ಸಹಕರಿಸಲು ಮುಂದೆ ಬರುವುದಿಲ್ಲ ? ಏಕೆಂದರೆ ಠೇವಣಿಗಳಲ್ಲಿ ಅಪ್ರಾಪ್ತ ವಯಸ್ಕನ ಹೆಸರಿನಲ್ಲಿರುವ ಶಿಲ್ಕು ಅತ್ಯಂತ ಸ್ಥಿರವಾಗಿ ಉಳಿಯುವಂಥದು.

ಆದರೆ ನಿಲ್ಲಿ, ಒಂದು ವಿಚಾರ ಯೋಚಿಸಿ. ಇದು ಮುಳ್ಳುಗುಲಾಬಿಯಷ್ಟೇ ಸಂಕೀರ್ಣ ಸಮಸ್ಯೆ. ಠೇವಣಿಯ ಗುಲಾಬಿಗೆ ಆಸೆಪಟ್ಟು ಕಾನೂನಿನ ತೊಡಕೆಂಬ ಮುಳ್ಳನ್ನು ಮುಟ್ಟಿದಂತಾಗುತ್ತದೆ. ಕಿರಿಯ ಗ್ರಾಹಕನ ಖಾತೆ ಕಿರಿಕಿರಿಯೇ. ಎಚ್ಚರ ವಹಿಸದಿದ್ದರೆ ಅತ್ಯಂತ ಹೆಚ್ಚಿನ ಪ್ರಮಾಣದ ತಕರಾರು ಕಟ್ಟಿಟ್ಟದ್ದೆ.

ಏಕೆ ಹೀಗೆ ? ಉತ್ತರವೂ ಇದೆ. ಅಪ್ರಾಪ್ತ ವಯಸ್ಕನ ಮುಗ್ಧತನವನ್ನು, ಅಸಹಾಯಕತೆಯನ್ನು ಯಾರೂ ದುರುಪಯೋಗಪಡಿಸಿಕೊಳ್ಳದಿರಲೆಂದು ಕಾನೂನು ಹಲವಾರು ಇತಿಮಿತಿಗಳನ್ನು ನಿರ್ಮಿಸಿದೆ. ಅವನೊಂದಿಗೆ ವ್ಯವಹರಿಸುವ ಬ್ಯಾಂಕರ್ ಕೂಡ ಅನಿವಾರ್ಯವಾಗಿ ಕಾನೂನಿನ ಇತಿಮಿತಿಗಳನ್ನರಿತೇ ಮುಂದುವರಿಯಬೇಕಾಗಿದೆ.

## ಬ್ಯಾಂಕ್ ಖಾತೆ ಮತ್ತು ಕರಾರು

ಇನ್ನಿತರ ಯಾವುದೇ ವ್ಯವಹಾರದಂತೆ ಬ್ಯಾಂಕ್ ಖಾತೆಯನ್ನು ತೆರೆಯುವುದೂ ಒಂದು ಕರಾರು. ಭಾರತದ 1872ರ ಕರಾರು ಅಧಿನಿಯಮ 10ನೆಯ ಪ್ರಕರಣದ ವ್ಯಾಖ್ಯೆಯನ್ನು ಇಲ್ಲಿ ಪಾಲಿಸಲೇಬೇಕು. ಯಾವುದೇ ಒಪ್ಪಂದಕ್ಕೆ ಎರಡೂ ಕಕ್ಷಿಗಳ ಮುಕ್ತ ಒಪ್ಪಿಗೆಯಿದ್ದಲ್ಲಿ ಮತ್ತು ಆ ಎರಡೂ ಕಕ್ಷಿಗಳು ಕರಾರು ಮಾಡಿಕೊಳ್ಳಲು ಅರ್ಹತೆ ಪಡೆದಿದ್ದಲ್ಲಿ ಅದು ಕರಾರು ಎನಿಸಿಕೊಳ್ಳುತ್ತದೆ. ಯಾರು ಯಾರು ಕರಾರು ಮಾಡಿಕೊಳ್ಳಲು ಅರ್ಹರು ಎಂಬುದನ್ನು ಪ್ರಕರಣ 11ರಲ್ಲಿ ವಿವರಿಸಲಾಗಿದೆ :

"ತನ್ನ ದೇಶದ ಕಾನೂನು ನಿಗದಿಪಡಿಸಿದಂತೆ ವಯಸ್ಕನಾದವನು. ಸ್ವಸ್ಥಚಿತ್ತನಾಗಿರುವವನು ಮತ್ತು ತನ್ನ ದೇಶದ ಕಾನೂನಿನಂತೆ ಕರಾರು ಹೊಂದಲು ಅನರ್ಹನಾಗದವನು ಕರಾರು ಮಾಡಿಕೊಳ್ಳಲು ಸಮರ್ಥ."

ಇದರಂತೆ ವಯಸ್ಕನಾಗದವನು ಕರಾರು ಮಾಡಿಕೊಳ್ಳಲಾರ. ಅವನು ಮಾಡಿಕೊಂಡ ಒಪ್ಪಂದದ ಪಾಲನೆಗಾಗಿ ವಯಸ್ಕನಾದ ಮೇಲೂ ಅವನ ಮೇಲೆ ದಾವೆ ಹೂಡುವಂತಿಲ್ಲ. ಅದನ್ನು ಊರ್ಜಿತಗೊಳಿಸುವಂತಿಲ್ಲ. ಅಂಥ ಒಪ್ಪಂದಗಳು ಶೂನ್ಯ ಎನಿಸಿಕೊಳ್ಳುತ್ತವೆ.

## ಯಾರು ಅಪ್ರಾಪ್ತ ವಯಸ್ಕ ?

1875ರ ಭಾರತೀಯ ಪ್ರಾಪ್ತವಯಸ್ಕತೆ ಅಧಿನಿಯಮದ ಪ್ರಕರಣ 3ರ ಪ್ರಕಾರ ವಯಸ್ಕನೆಂದರೆ ಅವನು :

1 ಹದಿನೆಂಟು ವರ್ಷ ಪೂರೈಸಿರಬೇಕು.
2 ಅವನ ಪೋಷಣೆಗೆ ಅಥವಾ ಅವನ ಆಸ್ತಿಯ ನಿರ್ವಹಣೆಗಾಗಿ ಪಾಲಕರೊಬ್ಬರು ನೇಮಕವಾಗಿದ್ದರೆ ಅಂಥವನ ವಯಸ್ಕತೆ 21 ವರ್ಷಕ್ಕೆ ಬರುತ್ತದೆ.
3 ಸದರಿ ವ್ಯಕ್ತಿ ಹುಟ್ಟಿನಿಂದ ಭಾರತದ ಪ್ರಜೆಯಾಗದಿದ್ದಲ್ಲಿ ಅವನು ವಾಸಿಸುವ ದೇಶದ ಕಾನೂನು ಅನ್ವಯವಾಗುತ್ತದೆ.

ಇದರಂತೆ ಸಾಮಾನ್ಯವಾಗಿ ಹದಿನೆಂಟು ವರ್ಷದೊಳಗಿನ ಮತ್ತು ನ್ಯಾಯಾಲಯದಿಂದ ಪಾಲಕ ನೇಮಕವಾಗಿದ್ದಲ್ಲಿ 21 ವರ್ಷದೊಳಗಿನ ವ್ಯಕ್ತಿ ಅಪ್ರಾಪ್ತವಯಸ್ಕನೆನಿಸುತ್ತಾನೆ. ಬೇರೆ ಬೇರೆ ಅಧಿನಿಯಮಗಳು ಅಪ್ರಾಪ್ತವಯಸ್ಕನನ್ನು ಕುರಿತು ಪ್ರಸ್ತಾಪಿಸಿದರೂ, ವ್ಯವಹಾರ ಮಾಡುವ ಬ್ಯಾಂಕರನ ದೃಷ್ಟಿಯಿಂದ ಕರಾರು ಅಧಿನಿಯಮದ 11ನೆಯ ಪ್ರಕರಣದ ವ್ಯಾಖ್ಯೆ ಉಪಯುಕ್ತವಾದುದು.

ಅಪ್ರಾಪ್ತವಯಸ್ಕರು, ಅಪಕ್ವ ಬೌದ್ಧಿಕಮಟ್ಟ ಮತ್ತು ಅಪೂರ್ಣ ವಿವೇಚನೆಯ ಸ್ಥಿತಿಯಿಂದಾಗಿ, ತಮ್ಮ ಕ್ಷೇಮವನ್ನು ತಾವು ಸಮರ್ಥವಾಗಿ ಕಾಪಾಡಿಕೊಳ್ಳಲಾರರು ಎಂಬ ಕಾರಣಕ್ಕಾಗಿ ಕಾನೂನಿನ ವಿಶೇಷ ಸವಲತ್ತು ಪಡೆದಿದ್ದಾರೆ. ನ್ಯಾಯಾಧೀಶರೆಲ್ಲ ಅವರ ಸಲಹೆಗಾರರಿದ್ದಂತೆ. ಕಾನೂನು ಅವರ ಪೋಷಕನಿದ್ದಂತೆ.

## ಪಾಲಕನ ಪಾತ್ರ

ಅಪ್ರಾಪ್ತ ವಯಸ್ಕ ಸ್ವತಃ ಪ್ರತಿನಿಧಿಸಲು ಅಸಮರ್ಥನಾಗಿರುವುದರಿಂದ ಪಾಲಕನ ಪಾತ್ರವೊಂದು ಸೃಷ್ಟಿಯಾಗಿದೆ. ಹಿಂದೂ ಅಪ್ರಾಪ್ತವಯಸ್ಕತೆ ಹಾಗೂ ಪಾಲಕತ್ವ ಅಧಿನಿಯಮ ಪ್ರಕರಣ 4ಬಿಯಂತೆ ಪಾಲಕನೆಂದರೆ ಅಪ್ರಾಪ್ತವಯಸ್ಕನನ್ನಾಗಲಿ, ಅವನ ಆಸ್ತಿಯನ್ನಾಗಲಿ ಅಥವಾ ಎರಡನ್ನೂ ಆಗಲಿ ರಕ್ಷಿಸುವ ವ್ಯಕ್ತಿ.

ಪಾಲಕರು ಸಾಮಾನ್ಯವಾಗಿ ಈ ಮೂರು ರೀತಿಯಲ್ಲಿರುತ್ತಾರೆ :

1 ಸ್ವಾಭಾವಿಕ ಪಾಲಕ
2 ಉಯಿಲಿನಲ್ಲಿ ನಾಮನಿರ್ದೇಶಗೊಂಡ ಪಾಲಕ
3 ಪ್ರಮಾಣಿತ ಪಾಲಕ

ಅಪ್ರಾಪ್ತ ವಯಸ್ಕ ಹುಡುಗ ಅಥವಾ ಮದುವೆಯಾಗದ ಹುಡುಗಿಯ ವಿಷಯದಲ್ಲಿ ಅವನ/ಅವಳ ತಂದೆ, ಅನಂತರ ತಾಯಿ ಸ್ವಾಭಾವಿಕ ಪಾಲಕರಾಗುತ್ತಾರೆ.

ಮದುವೆಯಾದ ಅಪ್ರಾಪ್ತವಯಸ್ಕಳಿಗೆ ಅವಳ ಗಂಡ ಪೋಷಕನಾಗುತ್ತಾನೆ. ಯಾವನೇ ಪಾಲಕ ಹಿಂದೂಧರ್ಮವನ್ನು ತ್ಯಜಿಸಿದರೆ ಅಥವಾ ಸಂನ್ಯಾಸ ಸ್ವೀಕರಿಸಿದರೆ ಸ್ವಾಭಾವಿಕವಾಗಿ ಪಾಲಕನಾಗಿರುವ ಅರ್ಹತೆಯನ್ನು ಕಳೆದುಕೊಳ್ಳುತ್ತಾನೆ.

ಮಲತಾಯಿ ಅಥವಾ ಮಲತಂದೆಗೆ ಸ್ವಾಭಾವಿಕ ಪಾಲಕತ್ವದ ಹಕ್ಕಿಲ್ಲ. ಆದರೆ ದತ್ತುಪುತ್ರನಿಗೆ ಸಂಬಂಧಿಸಿದಂತೆ ಸಾಕುತಂದೆ, ಅನಂತರ ಸಾಕುತಾಯಿ ಅಂಥ ಅಪ್ರಾಪ್ತವಯಸ್ಕನ ಸ್ವಾಭಾವಿಕ ಪಾಲಕ ರಾಗುತ್ತಾರೆ.

ಉಯಿಲಿನ ಮೂಲಕ ನಾಮನಿರ್ದೇಶಿತ ಪಾಲಕ ರನ್ನು ತಂದೆ/ತಾಯಿ ಉಯಿಲಿನಲ್ಲಿ ಉಲ್ಲೇಖಿಸಿರು ತ್ತಾರೆ. ಇವರಿಗೆ ಸ್ವಾಭಾವಿಕ ಪಾಲಕರ ಮರಣಾ ನಂತರ ಪಾಲಕ ಸ್ಥಾನ ಲಭಿಸುತ್ತದೆ. ಉಯಿಲಿನಲ್ಲಿ ಏನೂ ಪ್ರಸ್ತಾಪವಿಲ್ಲದಿದ್ದಲ್ಲಿ ತಾಯಿ ಅಪ್ರಾಪ್ತ ವಯಸ್ಕನ ಪಾಲಕಳಾಗುತ್ತಾಳೆ.

ಪಾಲಕನಿಗೆ ಹಲವಾರು ಜವಾಬ್ದಾರಿಗಳಿವೆ. ಅವನು ಅಪ್ರಾಪ್ತ ವಯಸ್ಕನಿಗೆ ಅನುಕೂಲವಾಗುವ ರೀತಿಯಲ್ಲಿ ಯುಕ್ತವಾದ ರೀತಿಯಲ್ಲೇ ವ್ಯವಹರಿಸ ಬೇಕಾಗುತ್ತದೆ. ನ್ಯಾಯಾಲಯದ ಅನುಮತಿಯಿಲ್ಲದೆ ಅವನು ಅಪ್ರಾಪ್ತ ವಯಸ್ಕನ ಸ್ಥಿರ ಆಸ್ತಿಯನ್ನು ವಿಲೆ ಮಾಡಲಾರ ತನ್ನ ವ್ಯವಹಾರಗಳಿಂದ ಅಪ್ರಾಪ್ತ ವಯಸ್ಕನನ್ನು ಯಾವುದೇ ಸಂದರ್ಭದಲ್ಲಿ ಹೊಣೆಗೀಡುಮಾಡಲಾರ.

ಈ ಸಾಮಾನ್ಯ ಕಾನೂನು ಪರಿಸ್ಥಿತಿಯ ಜತೆಗೆ ಬ್ಯಾಂಕರ್ ಇನ್ನೂ ಹಲವಾರು ಕಾನೂನು ಪ್ರಸ್ತಾಪ ಗಳನ್ನು ಗಮನಿಸಬೇಕಾಗುತ್ತದೆ:

1 1872ರ ಭಾರತೀಯ ಕರಾರು ಅಧಿನಿಯ ಮದ 26ನೆಯ ಪ್ರಕರಣದನ್ವಯ ಅಪ್ರಾಪ್ತ ವಯಸ್ಕನೊಬ್ಬ ಸಂಲೇಖವೊಂದನ್ನು (ಚೆಕ್, ಹುಂಡಿ ಇತ್ಯಾದಿ) ರಚಿಸಬಹುದು. ವರ್ಗಾಯಿಸಬಹುದು. ಅಥವಾ ಬಟವಾಡೆ ಮಾಡಬಹುದು. ಆದರೆ ಈ ವ್ಯವಹಾರದಲ್ಲಿ ಉಳಿದ ಎಲ್ಲ ಕಕ್ಷಿಗಳೂ ಬಾಧ್ಯ ರಾಗುತ್ತಾರೆ. ಆದರೆ ಅಪ್ರಾಪ್ತವಯಸ್ಕ ಮಾತ್ರ ಬಾಧ್ಯನಾಗಲಾರ. ಉದಾಹರಣೆಗೆ ಅಪ್ರಾಪ್ತ ವಯಸ್ಕ ಚೆಕ್ ಬರೆದು 'ಬಿ'ಗೆ ನೀಡಬಹುದು. 'ಬಿ' ಅದನ್ನು 'ಸಿ'ಗೆ ನೀಡಬಹುದು. ಖಾತೆಯಲ್ಲಿ ಶಿಲ್ಕು ಇಲ್ಲವೆಂದು ಚೆಕ್ ವಾಪಸಾದರೆ 'ಬಿ'ಯು 'ಸಿ'ಗೆ ಬಾಧ್ಯ. ಅಪ್ರಾಪ್ತ ವಯಸ್ಕನಲ್ಲ.

ಅದರಂತೆ ಅಪ್ರಾಪ್ತವಯಸ್ಕನೊಬ್ಬ ಖಾತೆ ತೆರೆದಾಗ ಖಾತೆಯ ಶಿಲ್ಕು ಯಾವಾಗಲೂ ಜಮೆ ಯಲ್ಲಿರುವುದು ಅತ್ಯಗತ್ಯ. ಸರ್ ಜಾನ್ ಜೇಟ್ ಅಭಿಪ್ರಾಯದಂತೆ ಸರ್ವಸಮ್ಮತ ಕಾನೂನಿನ ಆಧಾರದಂತೆ ಅಪ್ರಾಪ್ತವಯಸ್ಕನಿಗೆ ಚೆಕ್ ಬರೆ ಯುವ ಅಧಿಕಾರವಿರುವಾಗ ಪಾವತಿಯನ್ನು ನಿರಾ ಕರಿಸಲು ಬ್ಯಾಂಕರನಿಗೆ ಸಾಧ್ಯವಿಲ್ಲ.

ಸಾಮಾನ್ಯವಾಗಿ ಭಾರತೀಯ ಬ್ಯಾಂಕ್‌ಗಳು ತೀರಾ ಅಪಕ್ವ ವಯಸ್ಕನ ಹೆಸರಿನಲ್ಲಿ ಖಾತೆ ತೆರೆಯು ವುದಿಲ್ಲ. ಖಾತೆ ತೆರೆದರೂ ಒಂದು ನಿರ್ದಿಷ್ಟ ಮೊತ್ತ (ಸುಮಾರು ರೂ. 50,000) ಮೀರಿ ಠೇವಣಿ ಸ್ವೀಕರಿಸುವುದಿಲ್ಲ. ಅಪ್ರಾಪ್ತ ವಯಸ್ಕನ ಹೆಸರಿನಲ್ಲಿ ಪಾಲಕ ನಿರ್ವಹಿಸುವ ಖಾತೆ ತೆರೆಯಲು ಪ್ರೋತ್ಸಾ ಹಿಸುವ ಸಂದರ್ಭಗಳೇ ಹೆಚ್ಚು.

2 ಕರಾರು ಅಧಿನಿಯಮದ ಪ್ರಕರಣ 184 ರಂತೆ ಅಪ್ರಾಪ್ತ ವಯಸ್ಕ ಅಭಿಕರ್ತೃವಾದಾಗ ಅಂಥ ಅಭಿಕರ್ತೃವಿನ ಕ್ರಿಯೆ ಯಜಮಾನನನ್ನು ಹೊಣೆಗೀಡುಮಾಡುತ್ತದೆ. ಅಪ್ರಾಪ್ತವಯಸ್ಕ ಜವಾಬ್ದಾರನಾಗಲಾರ.

3 ಪಾಲುದಾರಿಕೆ ಅಧಿನಿಯಮದಂತೆ, ಅಪ್ರಾಪ್ತ ವಯಸ್ಕ ಪಾಲುದಾರನಾಗಲಾರ. ಆದರೆ ಪಾಲುದಾರಿಕೆಯ ಹಿತಲಾಭಗಳಿಗಾಗಿ ಅವನನ್ನು ಸೇರಿಸಿಕೊಳ್ಳಬಹುದು. ಅಪ್ರಾಪ್ತ ವಯಸ್ಕ ಪ್ರಾಪ್ತ ವಯಸ್ಕನಾದ ಆರು ತಿಂಗಳೊಳಗೆ ಸಾರ್ವ ಜನಿಕ ತಿಳಿವಳಿಕೆ ಮೂಲಕ ಅನ್ಯಥಾ ಘೋಷಣೆ ನೀಡದಿದ್ದಲ್ಲಿ ಪಾಲುದಾರಿಕೆಯ ಹೊಣೆಗಾರಿಕೆಗೆ ಬಾಧ್ಯನಾಗುತ್ತಾನೆ.

4 ಅಪ್ರಾಪ್ತ ವಯಸ್ಕನೊಬ್ಬ ಪಡೆದ ಸಾಲಕ್ಕೆ ಜಾಮೀನು ನೀಡಿದ ಮೂರನೆಯ ಕಕ್ಷಿಯ ವಿಷಯದಲ್ಲಿ ಹಲವಾರು ಅಭಿಪ್ರಾಯಭೇದಗಳಿವೆ. ಜಾಮೀನು ನೀಡಿದಾತ ಪ್ರಧಾನ ಋಣಿಯಾಗಿ ಬಾಧ್ಯನಾಗುತ್ತಾನೆಂದು ಮುಂಬಯಿ ಉಚ್ಚ ನ್ಯಾಯಾಲಯ ವಿ. ಶ್ರೀಪತ್ (1895) ಪ್ರಕರಣ ದಲ್ಲಿ ತೀರ್ಮಾನವಾಗಿದೆ.

ಪ್ರಧಾನ ಋಣಿಯಾದ ಅಪ್ರಾಪ್ತ ವಯಸ್ಕನ ಮೇಲೇ ಕ್ರಮ ಜರುಗಿಸಲು ಸಾಧ್ಯವಿಲ್ಲದಾಗ ಜಾಮೀನು ನೀಡಿದ ಮೂರನೆಯ ಕಕ್ಷಿಯ ಮೇಲೆ ಕ್ರಮ ಜರುಗಿಸಲು ಹೇಗೆ ಸಾಧ್ಯ ಎಂಬ ಅಭಿ ಪ್ರಾಯ ಮದ್ರಾಸ್ ಉಚ್ಚ ನ್ಯಾಯಾಲಯದ ಎಚ್. ಎನ್. ನಂಬಿಯಾರ್ ವಿ. ಮೂಲಕಾಯ ರಾಮ್ ಪ್ರಕರಣದಲ್ಲಿ ವ್ಯಕ್ತಪಡಿಸಲಾಗಿದೆ. ಅಪ್ರಾಪ್ತವಯಸ್ಕನೊಬ್ಬನಿಗೆ ಸಾಲ ನೀಡುವುದು ಎಷ್ಟು ಜಟಿಲ ವಿಷಯ ಎಂಬುದನ್ನು ಈ ಪ್ರಕ ರಣಗಳು ವಿವರಿಸುತ್ತವೆ.

5 ಕಾಲಪರಿಮಿತಿ ಅಧಿನಿಯಮ (Limitation Act) ದಂತೆ ಅಪ್ರಾಪ್ತವಯಸ್ಕನೊಬ್ಬನ ವಿಷಯ ದಲ್ಲಿ ಕಾಲಪರಿಮಿತಿಯ ಅವಧಿ ಅವನು ವಯಸ್ಕ ನಾಗುವ ದಿನದಿಂದ ಆರಂಭವಾಗುತ್ತದೆ.

6 1908ರ ಸಿವಿಲ್ ಪ್ರಕ್ರಿಯಾ ಸಂಹಿತೆಯ ಆದೇಶ 32 ನಿಯಮ 3ರಂತೆ ಪ್ರತಿವಾದಿಯೊಬ್ಬ ಅಪ್ರಾಪ್ತವಯಸ್ಕನಾಗಿದ್ದರೆ, ನ್ಯಾಯಾಲಯ ಯುಕ್ತ ವ್ಯಕ್ತಿಯೊಬ್ಬನನ್ನು ಪಾಲಕನನ್ನಾಗಿ ನೇಮಿ ಸುತ್ತದೆ (Guardian at litem).

7 ಅಪ್ರಾಪ್ತ ವಯಸ್ಕ ಕರಾರು ಮಾಡಿ ಕೊಳ್ಳಲು ಅನರ್ಹನಾದುದರಿಂದ ಅವನನ್ನು ದಿವಾಳಿ ಯೆಂದು ಘೋಷಿಸಲಾಗದು.

8. ತನ್ನ ವಯಸ್ಸನ್ನು ತಪ್ಪು ಘೋಷಿಸಿ ಕರಾರು ಮಾಡಿಕೊಳ್ಳುವ ಅಪ್ರಾಪ್ತ ವಯಸ್ಕ ಕೂಡ ಯಾವುದೇ ವ್ಯವಹಾರಗಳಿಗೆ ವೈಯಕ್ತಿಕ ವಾಗಿ ಬಾಧ್ಯನಾಗಲಾರ. ಯಾವುದೇ ಸಮಯದಲ್ಲಿ ಅಪ್ರಾಪ್ತ ವಯಸ್ಕ ತನ್ನ ನಿಜವಾದ ವಯಸ್ಸನ್ನು ಘೋಷಿಸಿಕೊಳ್ಳಬಹುದು. ಆದರೆ ತಪ್ಪು ವಯಸ್ಸಿನ ಆಧಾರದಿಂದ ಕರಾರು ಮಾಡಿಕೊಂಡು ಪಡೆದ ಲಾಭಗಳನ್ನು, ಆಸ್ತಿಗಳನ್ನು ವಾಪಸು ಮಾಡುವಂತೆ ಒತ್ತಾಯ ತರಬಹುದು.

## ಆಚರಣೆಯ ಕ್ರಮಗಳು

ಹೀಗೆ ವಿವಿಧ ಕಾನೂನುಗಳಲ್ಲಿ ಅಪ್ರಾಪ್ತವಯಸ್ಕ ನನ್ನು ಕುರಿತಂತೆ ವಿಭಿನ್ನ ಸೂಕ್ಷ್ಮ ಪ್ರಸ್ತಾಪಗಳಿರು ವುದರಿಂದ, ಅವನೊಂದಿಗೆ ವ್ಯವಹರಿಸುವ ಬ್ಯಾಂಕರ್ ಈ ಅಂಶಗಳನ್ನು ಅರಿತು ಮುಂದುವರಿಯಬೇಕಾಗು ತ್ತದೆ.

**1 ಅಪ್ರಾಪ್ತ ವಯಸ್ಕನ ಒಂಟಿ ಹೆಸರಿನಲ್ಲಿ ಖಾತೆ**

ಇಂಥ ಖಾತೆಗಳನ್ನು ಹತ್ತು ವರ್ಷ ದಾಟಿರುವ, ಸ್ವ-ವಿವೇಚನೆಯ ಶಕ್ತಿಯುಳ್ಳ ಅಪ್ರಾಪ್ತ ವಯಸ್ಕ ತೆರೆಯಬಹುದು. ಅಪ್ರಾಪ್ತ ವಯಸ್ಕನ ಮರಣ ಸಂಭವಿಸಿದಲ್ಲಿ ಮೃತನ ಖಾತೆಯ ಶಿಲ್ಕನ್ನು ಸ್ವಾಭಾ ವಿಕ ಪಾಲಕರಿಗೆ ಅಥವಾ ನ್ಯಾಯಾಲಯದಿಂದ ನೇಮಿತರಾದ ಪಾಲಕರಿಗೆ ಕಾನೂನಿನ ಪ್ರಕಾರ ಪಾವತಿ ಮಾಡಬಹುದು. ಅಪ್ರಾಪ್ತ ವಯಸ್ಕ ನೀಡುವ ಹುಟ್ಟಿದ ದಿನಾಂಕವನ್ನು ಜನನ ಪ್ರಮಾಣ ಪತ್ರ, ಶಾಲಾ ಪ್ರಮಾಣ ಪತ್ರ ಅಥವಾ ಇನ್ನಿತರ ದಾಖಲೆಗಳಿಂದ ದೃಢಪಡಿಸಿಕೊಳ್ಳಬೇಕು. ಅಪ್ರಾಪ್ತ ವಯಸ್ಕನಿಗೆ ಯಾವುದೇ ವಿಧವಾದ ಸಾಲಸೌಲಭ್ಯ ವನ್ನು ನೀಡಬಾರದು.

**2 ಸ್ವಾಭಾವಿಕ ಪಾಲಕರು ನಿರ್ವಹಿಸುವ ಅಪ್ರಾಪ್ತ ವಯಸ್ಕನ ಖಾತೆ**

ಹಿಂದೂ ಕಾನೂನಿನ ಪ್ರಕಾರ ತಂದೆ ಸ್ವಾಭಾವಿಕ ಪಾಲಕನಾಗಿದ್ದು ತಂದೆಯ ಮರಣಾನಂತರ ತಾಯಿಗೆ ಆ ಸ್ಥಾನ. ಕ್ರೈಸ್ತ ಹಾಗೂ ಪಾರಸಿಕರಲ್ಲೂ ತಂದೆಯೇ ಸ್ವಾಭಾವಿಕ ಪಾಲಕ. ನಂತರ ತಾಯಿ. ಮುಸ್ಲಿಂ ಕಾನೂನಿನಲ್ಲಿ ಸ್ವಾಭಾವಿಕ ಪಾಲಕರು ಈ ಕ್ರಮದಲ್ಲಿರುತ್ತಾರೆ: (1) ತಂದೆ (2) ತಂದೆಯ ಉಯಿಲಿನಲ್ಲಿ ನಾಮನಿರ್ದೇಶಿತನಾದ ಪೋಷಕ (3) ತಂದೆಯ ತಂದೆ, (4) ತಂದೆಯ ತಂದೆಯ ಉಯಿಲಿನಲ್ಲಿ ನಾಮನಿರ್ದೇಶಿತನಾದ ಪೋಷಕ (5) ನ್ಯಾಯಾಲಯದಿಂದ ನೇಮಿತನಾದ ಪೋಷಕ

ಪಾಲಕನ ಮೂಲಕ ಅಪ್ರಾಪ್ತವಯಸ್ಕನ ಹೆಸರಿನಲ್ಲಿ ಖಾತೆ ತೆರೆಯಬಹುದು. ಹಣ ಪಾಲಕನಿ ಸೇರಿದ್ದು, ಅಪ್ರಾಪ್ತವಯಸ್ಕನ ಭವಿಷ್ಯದ ದೃಷ್ಟಿ ಯಿಂದ ಹೀಗೆ ಮಾಡುವುದುಂಟು. ಅಪ್ರಾಪ್ತ ವಯಸ್ಕನ ಜನನ ದಾಖಲೆಯನ್ನು ಪರಿಶೀಲಿ ಖಾತೆಯಲ್ಲಿ ಅದನ್ನು ನಮೂದು ಮಾಡುವುದ ಅತ್ಯಾವಶ್ಯಕ. ಈ ಖಾತೆಗಳಿಗೆ ಹೀಗೆ ಶೀರ್ಷಿ ನೀಡಬೇಕು :

ಮಾಸ್ಟರ್‌ಕಿರಣ್, ತಂದೆಯಾದ ಶ್ರೀ ವಿಶ್ವನಾಥ (ಸ್ವಾಭಾವಿಕ ಪಾಲಕ) ಮೂಲಕ.

# ಹಣಪೇಟೆ ಕಾರ್ಯತಂಡದ ವರದಿ: ಕೆಲವು ಮುಖ್ಯಾಂಶಗಳು

**ಭಾರತದ ಹಣಪೇಟೆಯ ಸ್ಥಿತಿಗತಿಗಳನ್ನು ಅಭ್ಯಸಿಸಿ ಅದರ ಸುಧಾರಣೆಗೆ ಶಿಫಾರಸುಗಳನ್ನು ಸಲ್ಲಿಸಬೇಕೆಂದು ಭಾರತೀಯ ರಿಸರ್ವ್ ಬ್ಯಾಂಕಿನಿಂದ ನೇಮಕವಾಗಿದ್ದ ವಾಘುಲ್ ಸಮಿತಿ ತನ್ನ ವರದಿ ಸಲ್ಲಿಸಿ ಒಂದು ವರ್ಷವಾಯಿತು. ಆ ಸಮಿತಿಯ ಶಿಫಾರಸುಗಳ ಪರಿಚಯ ಇಲ್ಲಿದೆ.**

ಟಿ. ಕೆ. ರಂಗನಾಥ

ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

1985ರ ಸೆಪ್ಟೆಂಬರ್ ತಿಂಗಳಲ್ಲಿ ಭಾರತೀಯ ರಿಸರ್ವ್ ಬ್ಯಾಂಕು, ಭಾರತೀಯ ಕೈಗಾರಿಕಾ ಉದರಿ ಹಾಗೂ ವಿನಿಯೋಜನ ನಿಗಮದ ಅಧ್ಯಕ್ಷರಾದ ಎಸ್. ವಾಘುಲ್ ಅವರ ನೇತೃತ್ವದಲ್ಲಿ ಕಾರ್ಯತಂಡವೊಂದನ್ನು ನೇಮಿಸಿತು. ಈ ತಂಡದ ಉಳಿದ ಸದಸ್ಯರು ಎಂ. ಜೆ. ಫೆರ್ವಾನಿ (ಅಧ್ಯಕ್ಷರು, ಯೂನಿಟ್ ಟ್ರಸ್ಟ್ ಆಫ್ ಇಂಡಿಯ), ಎಸ್. ಪದ್ಮನಾಭನ್ (ಅಧ್ಯಕ್ಷರು ಇಂಡಿಯನ್ ಓವರ್‌ಸೀಸ್ ಬ್ಯಾಂಕು), ಆರ್. ನರಸಿಂಹನ್ (ಪ್ರಧಾನ ವ್ಯವಸ್ಥಾಪರು, ಕಾರ್ಯನಿರ್ವಹಣೆ, ಭಾರತೀಯ ಸ್ಟೇಟ್ ಬ್ಯಾಂಕ್), ಕೆ.ಸಜೀರೆ ತಾಮಸ್ (ಉಪಾಧ್ಯಕ್ಷರು, ಸಿಟಿಬ್ಯಾಂಕ್) ಹಾಗೂ ವಿ. ಬಿ. ದೇಸಾಯ್ (ಷೇರು/ಸ್ಟಾಕ್ ದಲಾಲರು). ಈ ಕಾರ್ಯತಂಡದ ಸದಸ್ಯ ಕಾರ್ಯದರ್ಶಿಯಾಗಿ ಭಾರತೀಯ ರಿಸರ್ವ್ ಬ್ಯಾಂಕ್ ಉದರಿ ಯೋಜನಾ ಕೋಶದ ಸಲಹೆಗಾರರಾದ ಎಸ್. ಎಸ್. ತಾರಾಪುರ್ ಅವರನ್ನು ನೇಮಿಸಲಾಗಿತ್ತು. ಈ ಕಾರ್ಯತಂಡ ತನ್ನ ವರದಿಯನ್ನು 1986ರ ಒಳಗೆ ಈ ಕೆಳಗಿನ ವಿಷಯಗಳ ಬಗ್ಗೆ ಅಭ್ಯಸಿಸಿ ಸಲ್ಲಿಸಬೇಕೆಂದು ಭಾರತೀಯ ರಿಸರ್ವ್ ಬ್ಯಾಂಕ್ ಬಯಸಿತ್ತು.

1 ಪ್ರಸ್ತುತ ಚಾಲ್ತಿಯಲ್ಲಿರುವ ಹಣಪೇಟೆಯ ಸಂಲೇಖಗಳ ಅಧ್ಯಯನ ಹಾಗೂ ಅವುಗಳ ಬೆಳವಣಿಗೆಗೆ ಸೂಕ್ತ ಕ್ರಮಗಳನ್ನು ಸೂಚಿಸುವುದು,

2 ಹಣಪೇಟೆಯ ಬಡ್ಡಿದರಗಳ ವಿನ್ಯಾಸವನ್ನು ಸೂಚಿಸುವುದರ ಜೊತೆಗೆ ಅವೂ ಮಾರುಕಟ್ಟೆಗಳಿಂದಲೇ ನಿರ್ಧರಿಸಲ್ಪಡಬೇಕೇ ಅಥವಾ ಬೇರೆ ಯಾವುದೇ ಅಭಿಕರಣದಿಂದ ನಿಯಂತ್ರಿಸಲ್ಪಡಬೇಕೇ ? ಎಂಬುದನ್ನು ಸೂಚಿಸುವುದು.

3 ಹಣಪೇಟೆಯಲ್ಲಿಯ ಭಾಗಿಗಳ ಸಂಖ್ಯೆಯನ್ನು ಹೆಚ್ಚಿಸುವುದರ ಸಾಧ್ಯತೆಯನ್ನು ಅಧ್ಯಯಿಸುವುದು.

4 ನಗದುದರಿ ವ್ಯವಸ್ಥೆಯಲ್ಲಿ ಮಾಡುವ ಬದಲಾವಣೆಯ ಪ್ರಭಾವ ಹಣಪೇಟೆಯ ಮೇಲೆ ಯಾವ ರೀತಿಯದು ಎಂಬುದನ್ನು ನಿರ್ಧರಿಸುವುದರ

## ಅಪ್ರಾಪ್ತ ವಯಸ್ಕನ ಖಾತೆ ಮತ್ತು ಬ್ಯಾಂಕ್

(ಹಿಂದಿನ ಪುಟದಿಂದ)

ಪಾಲಕ ವ್ಯವಹರಿಸುವಾಗ :
ಮಾಸ್ಟರ್ ಕಿರಣ್ ಪರವಾಗಿ
ಸಹಿ..............
ತಂದೆ ಮತ್ತು ಸ್ವಾಭಾವಿಕ ಪಾಲಕ

ಪಾಲಕನ ಸಾವಿನ ಸಂದರ್ಭದಲ್ಲಿ, ಮುಂದೆ ನೇಮಕವಾಗುವ ಪಾಲಕನ ಹೆಸರನ್ನು ಸೇರಿಸಿಕೊಳ್ಳಬಹುದು. ಅಕಸ್ಮಾತ್ ಅಪ್ರಾಪ್ತವಯಸ್ಕನ ಸಾವು ಸಂಭವಿಸಿದಲ್ಲಿ ಖಾತೆಯ ಶಿಲ್ಕನ್ನು ಪಾಲಕನಿಗೆ ಬ್ಯಾಂಕುಗಳಲ್ಲಿ ಸಾಮಾನ್ಯವಾಗಿ ಬಳಸುವ ನಷ್ಟ ಕರಾರು ಪತ್ರ ಪಡೆಯುವ ಮೂಲಕ ನೀಡಬಹುದು. ಅಪ್ರಾಪ್ತ ವಯಸ್ಕ ವಯಸ್ಕನಾದ ನಂತರ, ಅವನ ಮಾದರಿ ಸಹಿ ಪಡೆದು ಸ್ವತಂತ್ರವಾಗಿ ಖಾತೆ ನಿರ್ವಹಿಸಲು ಅನುವು ಮಾಡಿಕೊಡಬಹುದು. ಹಿಂದೂ ಕಾನೂನು ಪ್ರಕಾರ ತಂದೆ ಜೀವಂತವಿರುವಾಗ ತಾಯಿ ಸ್ವಾಭಾವಿಕ ಪಾಲಕಳಾಗುವುದಿಲ್ಲವಾದರೂ ಅಪ್ರಾಪ್ತವಯಸ್ಕನ ಹೆಸರಿನಲ್ಲಿ ತಾಯಿ ಖಾತೆ ನಿರ್ವಹಿಸಲು ರಿಸರ್ವ್ ಬ್ಯಾಂಕ್ ಅನುಮತಿ ನೀಡಿದೆ. ಈ ಸಂಬಂಧದಲ್ಲಿ ತಂದೆಯಿಂದ ಯಾವುದೇ ಆಕ್ಷೇಪಣೆ ಬಂದರೆ ಯುಕ್ತ ಕಾನೂನು ಸಲಹೆ ಪಡೆದು ಮುಂದುವರಿಯುವುದು ಒಳ್ಳೆಯದು.

### 3 ಅಪ್ರಾಪ್ತ ವಯಸ್ಕನೊಂದಿಗೆ ಸ್ವಾಭಾವಿಕ ಪಾಲಕ ಜಂಟಿಯಾಗಿ

ಇಂಥ ಖಾತೆಗಳನ್ನು ಇಬ್ಬರಲ್ಲೊಬ್ಬರು ಅಥವಾ ಬದುಕುಳಿದವರು (Either or Surviror) ಎಂಬ ಆಧಾರದ ಮೇಲೆ ತೆರೆಯಬಹುದು. ಪಾಲಕ ಎರಡು ಸಹಿ ಮಾಡಬೇಕಾಗುತ್ತದೆ. ಮೊದಲನೆಯದು ಅಪ್ರಾಪ್ತ ವಯಸ್ಕನ ಪರವಾಗಿ, ಎರಡನೆಯದು ಅವನ ವೈಯಕ್ತಿಕ ಸಹಿ. ಖಾತೆಯಲ್ಲಿ ವ್ಯವಹರಿಸುವಾಗ ಪಾಲಕ ಅವನ ವೈಯಕ್ತಿಕ ಸಹಿಯನ್ನು ಬಳಸಬೇಕು. ಅಪ್ರಾಪ್ತ ವಯಸ್ಕನ ಸಾವು ಸಂಭವಿಸಿದರೆ ಪಾಲಕ ಆ ಖಾತೆಯಲ್ಲಿರುವ ಶಿಲ್ಕು ಪಡೆಯಬಹುದು. ಪಾಲಕನ ಸಾವು ಸಂಭವಿಸಿದರೆ ಅಪ್ರಾಪ್ತವಯಸ್ಕನ ಪರವಾಗಿ ಮುಂದಿನ ಪಾಲಕ ಹಣ ಪಡೆಯಬಹುದು. ಅಪ್ರಾಪ್ತ ವಯಸ್ಕ, ವಯಸ್ಕನಾದಾಗ ಅವನ ಹೆಸರಿನಲ್ಲಿ ಹೊಸ ಖಾತೆ ಆರಂಭಿಸಿ, ಶಿಲ್ಕನ್ನು ವರ್ಗಾಯಿಸಬೇಕು.

ಕಾನೂನಿನ ಪರಿಸ್ಥಿತಿಯಿಂದಾಗಿ ಇಬ್ಬರು ಅಥವಾ ಹೆಚ್ಚು ಅಪ್ರಾಪ್ತವಯಸ್ಕರ ಹೆಸರಿನಲ್ಲಿ ಖಾತೆ ತೆರೆಯುವುದು ವಿವೇಕವಲ್ಲ. ಕಾನೂನಿನ ಪರಿಸ್ಥಿತಿ ಅರಿತು, ಬ್ಯಾಂಕಿಗೆ ಹಾನಿಯಾಗದ ರೀತಿಯಲ್ಲಿ ಅಪ್ರಾಪ್ತ ವಯಸ್ಕ ಖಾತೆ ನಿರ್ವಹಿಸಲು ಬ್ಯಾಂಕರ್ ಸಹಕರಿಸಬಹುದು.

ವಿವಿಧ ಕಾನೂನುಗಳಲ್ಲಿ ಪ್ರಸ್ತಾಪ ಮಾಡಿರುವ ಅಂಶಗಳಂತೆ ಅಪ್ರಾಪ್ತವಯಸ್ಕ ಕಾನೂನು ಮಾಡಿಕೊಳ್ಳಲು ಅನರ್ಹನಾಗಿರುವುದರಿಂದ ಬ್ಯಾಂಕುಗಳಿಗೆ ಕಿರಿಯನ (ಅಪ್ರಾಪ್ತ ವಯಸ್ಕ) ಖಾತೆ ಕಿರಿಕಿರಿಯದು ಎನಿಸಬಹುದು. ಆದರೆ ಅಪಾಯವೆಂದು ಭಾವಿಸಿ ದೂರವಿರುವುದೂ ಪ್ರಾಯೋಗಿಕವಾಗಲಾರದು. ಮೊದಲೇ ಹೇಳಿದಂತೆ ಅಪ್ರಾಪ್ತ ವಯಸ್ಕ ಸ್ಥಿರ ಠೇವಣಿ ತರಬಲ್ಲ ನೆಲೆಯಾದುದರಿಂದ ಬ್ಯಾಂಕ್ ಅವನಿಗಾಗಿ ಹಲವಾರು ಯೋಜನೆಗಳನ್ನು ಜಾರಿಗೆ ತಂದಿದೆ. ಬ್ಯಾಂಕುಗಳು ಅಪ್ರಾಪ್ತ ವಯಸ್ಕನನ್ನು ಸ್ವಾಗತಿಸಬೇಕು ಮತ್ತು ಅವನ ಖಾತೆಯನ್ನು ಎಚ್ಚರಿಕೆಯಿಂದ ನಿರ್ವಹಿಸಬೇಕು. □

ಜತೆಗೆವಷ್ಟ್ರದ ಮನೆಗಳಂಥ ವಿಶೇಷಸಂಸ್ಥೆಗಳನ್ನು ಅಭಿವೃದ್ಧಿಪಡಿಸುವುದರ ಆವಶ್ಯಕತೆಯನ್ನು ಪರಿಶೀಲಿಸುವುದು. ಈ ಸಂಬಂಧದಲ್ಲಿ ಅಂತರ ಕಂಪನಿ ಮಾರುಕಟ್ಟೆ ಹಾಗೂ ವಿಸ್ತೃತ ಹಣಪೇಟೆಯ ನಡುವಿನ ಅಂತರ್‌ಕ್ರಿಯೆಯನ್ನು ಅಭ್ಯಸಿಸುವುದು.

5 ಹಣಪೇಟೆಯ ಬೆಳವಣಿಗೆಯ ದೃಷ್ಟಿಯಿಂದ ಅದಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಚರ್ಚಿಸುವುದು.

ಕಾರ್ಯತಂಡ ತನ್ನ ವರದಿಯನ್ನು 1987ರಲ್ಲಿ ಸಲ್ಲಿಸಿತು. ಕಾರ್ಯತಂಡದ ಪ್ರಕಾರ ಯಾವುದೇ ಹಣಪೇಟೆ ಈ ಕೆಳಗಿನ ಮೂರು ಮೂಲ ಉದ್ದೇಶಗಳನ್ನು ಹೊಂದಿರುತ್ತದೆ:

ಮೊದಲನೆಯದು : ಅಲ್ಪಾವಧಿ ಹೆಚ್ಚಳ ಹಾಗೂ ಕೊರತೆಗಳನ್ನು ಸಮಗೊಳಿಸುವ ಸಂತುಲನ ತಂತ್ರವೊಂದನ್ನು ಆವಿಷ್ಕರಿಸುವುದು.

ಎರಡನೆಯದು : ಅರ್ಥವ್ಯವಸ್ಥೆಯಲ್ಲಿ ದ್ರವತ್ವದ ಮೇಲೆ ಪ್ರಭಾವಬೀರಲು ಕೇಂದ್ರ ಬ್ಯಾಂಕಿಗೆ ಅವಕಾಶ ನೀಡುವ ನಿರ್ದಿಷ್ಟ ಸೀಮಾ ಬಿಂದುವೊಂದನ್ನು ಒದಗಿಸುವುದು.

ಮೂರನೆಯದು : ಅಲ್ಪಾವಧಿ ಹಣದ ಆವಶ್ಯಕತೆಯುಳ್ಳವರಿಗೆ ನೈಜ ದರದಲ್ಲಿ ಸುಲಭವಾಗಿ ಹಣ ದೊರಕುವ ವ್ಯವಸ್ಥೆಯನ್ನು ಒದಗಿಸುವುದು. ಭಾರತದ ಹಣಪೇಟೆ ಈ ಮೂರೂ ಉದ್ದೇಶಗಳನ್ನು ಈಡೇರಿಸುವಂತಾಗಲು ಕಾರ್ಯತಂಡ ಮುಂದಿನ ಶಿಫಾರಸುಗಳನ್ನು ಮಾಡಿದೆ. ಈ ಶಿಫಾರಸುಗಳನ್ನು ಕಾರ್ಯಗತಗೊಳಿಸಲು ಕಾರ್ಯತಂಡ ಒಂದು ವೇಳಾಪಟ್ಟಿಯನ್ನು ಸೂಚಿಸಿದೆ.

ಕಾರ್ಯತಂಡ ತನ್ನ ಶಿಫಾರಸುಗಳನ್ನು ಕರೆ ಹಣಮಾರುಕಟ್ಟೆ, ಹುಂಡಿಗಳ ವಟಾವಣೆ, ಅಲ್ಪಕಾಲೀನ ವಾಣಿಜ್ಯಪತ್ರ, ಸರ್ಕಾರಿ ವಾಣಿಜ್ಯಪತ್ರ, ಹಣಕಾಸುಗೃಹವೊಂದರ ಸ್ಥಾಪನೆ, ಹೊಸ ಸಂಲೇಖಗಳು, ಅಂತರಬ್ಯಾಂಕ್ ಭಾಗಿ ಪತ್ರಗಳು, ಠೇವಣಿ ಪ್ರಮಾಣಪತ್ರಗಳು, ಅನುಪಾಶ್ರಯಣಸೇವೆ, ತತ್ಸಂಬದ್ಧ ಕಾನೂನು ಬದಲಾವಣೆಗಳು, ಆಚರಣೆಗೆ ತರುವ ವೇಳಾಪಟ್ಟಿ ಎಂಬ ಶೀರ್ಷಿಕೆಗಳಡಿ ಪಟ್ಟಿ ಮಾಡಿದೆ.

## ಹುಂಡಿಗಳಿಗೆ ಸಂಬಂಧಿಸಿದ ಮುಖ್ಯ ಶಿಫಾರಸುಗಳು

ಈಗ ಜಾರಿಯಲ್ಲಿರುವ ಪ್ರಾಪ್ಯಗಳ(Receivables) ಮೇಲೆ ನೀಡುವ ಉದರಿ ಸೌಲಭ್ಯವನ್ನು ಹುಂಡಿ ವಟಾವಣೆ ಸೌಲಭ್ಯವನ್ನಾಗಿ ಬದಲಾಯಿಸುವುದು. ಸದ್ಯಕ್ಕೆ ಈ ಬದಲಾವಣೆ ಉದರಿ ಪ್ರಾಧಿಕರಣದಡಿ ಬರುವ ಎಲ್ಲ ಸಾಲಗಾರರಿಗೆ ಕಡ್ಡಾಯವಾಗಿ ಅನ್ವಯಿಸಬೇಕು. ಹುಂಡಿ ವಟಾವಣೆ ಸೌಲಸೌಲಭ್ಯವನ್ನು ಆಧಾರಸಹಿತ ಸಾಲವೆಂದು ಪರಿಗಣಿಸಬೇಕು.

ತಾತ್ಕಾಲಿಕ ಹೆಚ್ಚಿನ ಹುಂಡಿ ವಟಾವಣೆ ಸೌಲಭ್ಯ ನೀಡಲು ಬ್ಯಾಂಕುಗಳಿಗೆಗೆ ವಿವೇಚನಾಧಿಕಾರ ನೀಡಬೇಕು. ಹುಂಡಿ ವಟಾವಣೆ ದರ ಶೇ. 16ಕ್ಕಿಂತ ಹೆಚ್ಚಾಗದಂತೆ ಆದೇಶ ನೀಡಬೇಕು.

ಸರ್ಕಾರದ ಎಲ್ಲಾ ಇಲಾಖೆಗಳೂ, ಸಾರ್ವಜನಿಕ ವಲಯದ ಉದ್ದಿಮೆಗಳೂ, ಉದರಿ ಪ್ರಾಧಿಕರಣ ಯೋಜನೆಯಡಿ ಸಾಲಪಡೆದವರೂ ತಮ್ಮ ಉದರಿ ಖರೀದಿಯನ್ನು ಹುಂಡಿ ಒಪ್ಪಿಗೆಯ ಮೂಲಕ ಮಾಡುವಂತೆ ನಿರ್ದೇಶನ ನೀಡಬೇಕು. ಪಕ್ವದಿನದಂದು ಹುಂಡಿಪಾವತಿ ಮಾಡದವರಿಗೆ ಶೇ. 2%ರಷ್ಟು ದಂಡಬಡ್ಡಿ ವಿಧಿಸಲು ಹಾಗೂ ಮೂರಕ್ಕಿಂತ ಹೆಚ್ಚು ಬಾರಿ ಪಕ್ವದಿನದಂದು ಹಣ ಪಾವತಿಮಾಡದ ಖಾಸಗಿ, ಸಾರ್ವಜನಿಕ ಹಾಗೂ ಜಂಟಿ ವಲಯದ ದೊಡ್ಡ ಗ್ರಾಹಕರ ದುಡಿಯುವ ಬಂಡವಾಳದ ಸಾಲದ ಮಿತಿಗಳನ್ನು ಕಡಿಮೆ ಮಾಡಲು ಬ್ಯಾಂಕುಗಳಿಗೆ ಅಧಿಕಾರವಿರಬೇಕು. ತಮ್ಮ ಉದರಿ ಖರೀದಿಯ ನಿರ್ದಿಷ್ಟಭಾಗವನ್ನು ಹುಂಡಿ ಒಪ್ಪಿಗೆಯ ಮೂಲಕ ಮಾಡದ ಗ್ರಾಹಕರಿಗೆ ಹೆಚ್ಚಿನ ಬಡ್ಡಿ ವಿಧಿಸಲು ಬ್ಯಾಂಕುಗಳಿಗೆ ಅಧಿಕಾರ ನೀಡಬೇಕು.

ಹುಂಡಿ ವಟಾವಣೆ ಸೌಲಭ್ಯವನ್ನು ಕಡ್ಡಾಯವಾಗಿ ಜಾರಿಗೆ ತರಲು ಅನುಕೂಲವಾಗುವಂತೆ 1988ರ ಏಪ್ರಿಲ್ 1ರೊಳಗಾಗಿ ತಮ್ಮ ಉದರಿ ಖರೀದಿಯ ಶೇ. 25ರಷ್ಟನ್ನಾದರೂ ಹುಂಡಿ ಒಪ್ಪಿಗೆಯ ಮೇಲೆ ಮಾಡಬೇಕಲ್ಲದೆ ಈ ಪ್ರಮಾಣವನ್ನು ಶೇ. 25ರಂತೆ ಹೆಚ್ಚಿಸುತ್ತಾ, ಏಪ್ರಿಲ್ 1990ರ ವೇಳೆಗೆ ಶೇ 75ರಷ್ಟನ್ನು ತಲುಪಬೇಕೆಂದು, ಉಳಿದ ಶೇ. 25ರಷ್ಟನ್ನು ಮಾತ್ರ ನಗದುದರಿಯಾಗಿ ನೀಡಬೇಕೇದು ಸಲಹೆ ಮಾಡಲಾಗಿದೆ.

ವರ್ಷಕ್ಕೆ ಸರಾಸರಿ 5 ಕೋಟಿಗಿಂತ ಅಧಿಕವಾಗಿ ಹೆಚ್ಚುವರಿ ನಿಧಿಗಳನ್ನು ಹೊಂದಿರುವ ಸಂಸ್ಥೆಗಳಿಗೆ ಭಾರತೀಯ ರಿಸರ್ವ್‌ಬ್ಯಾಂಕ್ ಹುಂಡಿ ವಟಾವಣೆ ಮಾಡಲು ಪರವಾನಗಿ ನೀಡಬೇಕೆಂದು ಶಿಫಾರಸು ಮಾಡಿದೆ.

ಹುಂಡಿ ವ್ಯವಹಾರವನ್ನು ಜನಪ್ರಿಯಗೊಳಿಸಲು ಅವುಗಳ ಮೇಲಿನ ಮುದ್ರಾಂಕ (ಸ್ಟ್ಯಾಂಪ್) ಶುಲ್ಕವನ್ನು ರದ್ದುಪಡಿಸಬೇಕು.

ಭಾರತದಲ್ಲಿ ಹುಂಡಿ ಆಧಾರಿತ ವ್ಯವಹಾರವನ್ನು ಹೆಚ್ಚಿಸಲು ಭಾರತೀಯ ರಿಸರ್ವ್ ಬ್ಯಾಂಕ್ ಬಹಳ ವರ್ಷಗಳಿಂದ ಪ್ರಯತ್ನ ನಡೆಸುತ್ತಿದೆ. ರಿಸರ್ವ್ ಬ್ಯಾಂಕ್ 1973ರಲ್ಲಿ ಜಾರಿಗೆ ತಂದ ಹೊಸ ಮಾರುಕಟ್ಟೆ ಯೋಜನೆ ಸಹ ಫಲಕಾರಿಯಾಗಿಲ್ಲ. 1975ರಲ್ಲಿ ಉದರಿಯ ಉಸ್ತುವಾರಿಯ ಬಗ್ಗೆ ಅಧ್ಯಯನ ನಡೆಸಿದ ಅಧ್ಯಯನ ತಂಡ ಸಹ ನೀಡಿದ ಉದರಿಯ ಸರಿಯಾದ ಉಪಯೋಗವನ್ನು ಖಚಿತಪಡಿಸಿಕೊಳ್ಳಲು ಸಾಧ್ಯವಾದಷ್ಟು ಮಟ್ಟಿಗೆ ಪ್ರಸ್ತುತ ಜಾರಿಯಲ್ಲಿರುವ ಮೀರೆಳೆತ/ನಗದುದರಿ ಪದ್ಧತಿಯನ್ನು ಹುಂಡಿವಟಾವಣೆ ಪದ್ಧತಿಯಾಗಿ ಪರಿವರ್ತಿಸಬೇಕೆಂದು ಸಲಹೆ ನೀಡಿದರೂ ಅದು ಇನ್ನೂ ಜಾರಿಯಾಗಿಲ್ಲ.

ಹುಂಡಿ ಒಪ್ಪಿಗೆಯನ್ನು ಕಡ್ಡಾಯಗೊಳಿಸುವುದರ ಜೊತೆಗೆ, ಪಾವತಿ ಮಾಡದಿದ್ದಲ್ಲಿ ದಂಡದ ಭಯ ಇರುವುದರಿಂದ ಇನ್ನು ಮುಂದೆ ಹುಂಡಿ ಸಂಸ್ಕೃತಿ ಬೆಳೆದೀತೋ ಎಂದು ಕಾದು ನೋಡಬೇಕಾಗಿದೆ.

ಹುಂಡಿ ಪೇಟೆಯನ್ನು ಮರುವಟಾವಣೆಯ ಮೂಲಕ ಪ್ರವೇಶಿಸಲು ಖಾಸಗಿ ಕಂಪನಿಗಳಿಗೆ ಅವಕಾಶ ಕೊಡುವುದು ಸಹ ಹೊಸ ಹುಂಡಿ ಮಾರುಕಟ್ಟೆಯ ವ್ಯಾಪಕತೆಗೆ ನಾಂದಿಯಾಗಬಹುದು.

## ಕರೆ ಹಣ ಮಾರುಕಟ್ಟೆಯ ಸುಗಮತೆಗಾಗಿ ಶಿಫಾರಸುಗಳು

ಕರೆ ಹಣದ ಮೇಲಿನ ಬಡ್ಡಿಯ ಗರಿಷ್ಠಮಿತಿಯನ್ನು ರದ್ದುಗೊಳಿಸಿ ಮಾರುಕಟ್ಟೆ ತನ್ನದೇ ಆದ ಬಡ್ಡಿದರವನ್ನು ಕಂಡುಕೊಳ್ಳಲು ಅವಕಾಶವಿರಬೇಕು.

ಈಗ ಕರೆ ಹಣ ಮಾರುಕಟ್ಟೆಯಲ್ಲಿ ಭಾಗವಹಿಸುತ್ತಿರುವ ಜೀವ ವಿಮಾ ನಿಗಮ, ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಸಂಸ್ಥೆಗಳು ಮಾರುಕಟ್ಟೆಯಲ್ಲಿ ಭಾಗವಹಿಸುವುದರ ಬಗ್ಗೆ ಭಾರತೀಯ ರಿಸರ್ವ್ ಬ್ಯಾಂಕ್ ಏಪ್ರಿಲ್ 1988ರಲ್ಲಿ ಪುನರ್‌ಪರಿಶೀಲನೆ ನಡೆಸಬೇಕು.

ಅಂತರ ಬ್ಯಾಂಕ್ ಅಲ್ಪಾವಧಿ ಹಾಗೂ ದೀರ್ಘಾವಧಿ ಠೇವಣಿಗಳ ಮೇಲೆ ನೀಡುವ ಬಡ್ಡಿಯ ದರದ ಗರಿಷ್ಠಮಿತಿಯನ್ನು ಏಪ್ರಿಲ್ 1981ರಿಂದ ತೆಗೆದುಹಾಕಬೇಕು.

ಅಂತರ ಬ್ಯಾಂಕ್ ಭಾಗಿ ಸಾಲಪತ್ರಗಳ **(Inter-bank Participation Certificate)** ನೀಡಿಕೆಯನ್ನು ಏಪ್ರಿಲ್ 1, 1987ರಿಂದ ಪುನರಾರಂಭಿಸಬೇಕು. 182 ದಿನಗಳ ಖಜಾನೆ ಹುಂಡಿಗಳಿಗೆ ಚುರುಕಾದ ದ್ವಿತೀಯ ಪೇಟೆ ದೊರಕಿಸಲು ಹಾಗೂ ಹೆಚ್ಚು ಜನರು ಅವುಗಳ ಹರಾಜಿನಲ್ಲಿ ಭಾಗವಹಿಸುವಂತಾಗಲು ಅವುಗಳ ದರವನ್ನು ನಮ್ಯ ಮಾಡಬೇಕು ಹಾಗೂ ಪುನರ್ಧನ ಸೌಲಭ್ಯವನ್ನು ಭಾರತೀಯ ರಿಸರ್ವ್ ಬ್ಯಾಂಕು ನೀಡಬೇಕು.

## ವಾಣಿಜ್ಯ ಪತ್ರ ನೀಡಿಕೆ ಬಗೆಗಿನ ಶಿಫಾರಸುಗಳು

ಮೊದಲ ದರ್ಜೆಯ ಕಂಪನಿಗಳು ವಾಣಿಜ್ಯ ಪತ್ರಗಳನ್ನು ಮಾರುಕಟ್ಟೆಗೆ ನೀಡುವುದರ ಮೂಲಕ ಹಣ ಸಂಗ್ರಹಿಸಲು ಅನುಮತಿ ನೀಡಬೇಕು. ಈ ಕಂಪನಿಗಳು ಭಾರತೀಯ ರಿಸರ್ವ್ ಬ್ಯಾಂಕಿನಿಂದ ಉದರಿ ಪ್ರಾಧಿಕರಣ ಯೋಜನೆಯಡಿ ಅನುಮತಿ ಪಡೆಯಬೇಕು. ಕಂಪನಿ ನೀಡಬಹುದಾದ ಬಡ್ಡಿಯನ್ನು ಮಾರುಕಟ್ಟೆಯ ಬಲಗಳು ನಿರ್ಧರಿಸಲು ಅವಕಾಶವಿರಬೇಕು. ಆದರೆ ಎಷ್ಟು ಹಣ ಸಂಗ್ರಹಿಸ

ಬೇಕೆಂಬುದನ್ನು ರಿಸರ್ವ್ ಬ್ಯಾಂಕ್ ನಿರ್ಧರಿಸಬೇಕೆಂದೂ ಹಾಗೆ ಸಂಗ್ರಹಿಸುವ ಹಣ ಪ್ರತಿ ಸಾರಿ ಕನಿಷ್ಠ ರೂ. 1 ಕೋಟಿ ಇರಬೇಕೆಂದೂ ಪ್ರತಿ ಸಂಲೇಖ ರೂ. 5 ಲಕ್ಷಕ್ಕಿಂತ ಕಡಿಮೆ ಇರಬಾರದೆಂದೂ ಸೂಚಿಸಿದೆ. ಈ ಯೋಜನೆಯನ್ನು ಜಾರಿಗೆ ತರಲು ಬೇಕಾದ ಕಾನೂನುಗಳನ್ನು 1988ರ ಏಪ್ರಿಲ್ 1ರೊಳಗಾಗಿ ಜಾರಿಗೆ ತರಬೇಕು.

ಅಲ್ಪಾವಧಿ ಹಣ ಪೇಟೆ ಸಂಲೇಖಗಳಲ್ಲಿ ವ್ಯವಹರಿಸಲು 'ಫೈನಾನ್ಸ್ ಹೌಸ್ ಆಫ್ ಇಂಡಿಯ' ಎಂಬ ಪರಿಮಿತ ಸಂಸ್ಥೆಯೊಂದನ್ನು ಭಾರತೀಯ ರಿಸರ್ವ್ ಬ್ಯಾಂಕ್, ಸರ್ಕಾರಿ ವಲಯದ ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳು ಸೇರಿ ಜುಲೈ 1987ರ ಒಳಗೆ ಸ್ಥಾಪಿಸಬೇಕು ಹಾಗೂ ಈ ಸಂಸ್ಥೆ ಅಂತರ ಬ್ಯಾಂಕ್ ಕರೆ ಹಣ ಪೇಟೆಯ ದಲಾಲ್ ಆಗಿ ಕಾರ್ಯ ನಿರ್ವಹಿಸಬೇಕು ಎಂದು ಕಾರ್ಯ ತಂಡ ಶಿಫಾರಸು ಮಾಡಿದೆ.

## ಕೆಲವು ಅನಿಸಿಕೆಗಳು

ಭಾರತದ ಹಣಕಾಸು ಮಾರುಕಟ್ಟೆಯಲ್ಲಿ ಬ್ಯಾಂಕೇತರ ಸಂಸ್ಥೆಗಳು ಹುಟ್ಟಿದಂದಿನಿಂದ ಭಾಗವಹಿಸುತ್ತಿವೆ. ತಮ್ಮಲ್ಲಿರುವ ಅಲ್ಪಾವಧಿ ಹಣಕಾಸು ನಿಧಿಗಳನ್ನು ಅಗತ್ಯವಿರುವ ಬ್ಯಾಂಕುಗಳಿಗೆ ನೀಡಿ ಲಾಭ ಸಂಪಾದಿಸುವುದಲ್ಲದೆ ನೈಜ ದರದಲ್ಲಿ ಅಲ್ಪಾವಧಿ ನಿಧಿಯನ್ನು ಬ್ಯಾಂಕುಗಳಿಗೆ ನೀಡಿ ಅವುಗಳ ಅಗತ್ಯವನ್ನು ಪೂರೈಸಿವೆ. ಈಗ ಆ ಸಂಸ್ಥೆಗಳನ್ನು ಕರೆ ಹಣ ಪೇಟೆಯಿಂದ ಹೊರದೂಡುವುದು ಎಷ್ಟರ ಮಟ್ಟಿಗೆ ಸರಿ ಎಂಬುದನ್ನು ಕಾಲವೇ ಹೇಳಬೇಕು. ಆದರೆ ಭಾರತೀಯ ರಿಸರ್ವ್ ಬ್ಯಾಂಕು ಈ ಬಗ್ಗೆ ಇನ್ನೂ ತನ್ನ ನಿರ್ಧಾರವನ್ನು ತಿಳಿಸಿಲ್ಲ.

ಪ್ರಥಮ ದರ್ಜೆಯ ಕಂಪನಿಗಳಿಗೆ ವಾಣಿಜ್ಯ ಪತ್ರಗಳನ್ನು ನೀಡುವುದರ ಮೂಲಕ ಮುಕ್ತ ಮಾರುಕಟ್ಟೆಯಿಂದ ಹಣ ಸಂಗ್ರಹಿಸಲು ಅವಕಾಶ ನೀಡುವುದು ಬ್ಯಾಂಕುಗಳ ಮೇಲೆ ನಿಧಿಗಾಗಿ ಆ ಕಂಪನಿಗಳ ಅವಲಂಬನೆಯನ್ನು ಕಡಿಮೆ ಮಾಡುತ್ತದೆ. ಅದರಿಂದಾಗಿ ಬ್ಯಾಂಕುಗಳು ಸಾಲವನ್ನು ಇತರ ಕಂಪನಿಗಳಿಗೆ ನೀಡಲು ತಮ್ಮ ನಿಧಿಯನ್ನು ಬಳಸಬೇಕಾಗುತ್ತದೆ. ಹಾಗಾಗಿ ಬ್ಯಾಂಕುಗಳ ಸಂಪನ್ಮೂಲ ಸಂಗ್ರಹಣಾ ಸಾಮರ್ಥ್ಯ ಕಡಿಮೆಯಾಗುವುದರ ಜೊತೆಗೆ ಉದರಿಯ ಗುಣ ಹಾಗೂ ಆಧಾರ ಸಹ ಕುಂದಿ ಬ್ಯಾಂಕುಗಳ ಲಾಭಪ್ರದತೆಯ ಮೇಲೆ ಪರಿಣಾಮವಾಗಬಹುದೆಂಬ ವಾದವನ್ನು ಸಂಪೂರ್ಣವಾಗಿ ತಳ್ಳಿಹಾಕಲು ಆಗುವುದಿಲ್ಲ.

ಈ ಕಾರ್ಯತಂಡದ ಶಿಫಾರಸುಗಳಲ್ಲಿ ಹಲವಷ್ಟನ್ನು ಇನ್ನೂ ಜಾರಿಗೆ ತರದಿರುವುದರಿಂದ ಇವುಗಳನ್ನು ಜಾರಿಗೆ ತರದಿರುವುದರ ಬಗ್ಗೆ ಇನ್ನೂ ಸರಕಾರ ಹಾಗೂ ರಿಸರ್ವ್ ಬ್ಯಾಂಕ್ ಮತ್ತಷ್ಟು ಆಲೋಚಿಸುತ್ತಿದೆಯೆಂದು ಭಾವಿಸಬಹುದು.

**ವರದಿಯ ಆಧಾರದ ಮೇಲೆ ರಿಸರ್ವ್ ಬ್ಯಾಂಕ್ ತೆಗೆದುಕೊಂಡ ಕ್ರಮಗಳು**

1 1988ರ ಏಪ್ರಿಲ್ 1ರ ಒಳಗಾಗಿ ಉದರಿ ಪ್ರಾಧಿಕರಣ ಸಾಲಗಾರರಿಗೆ ನೀಡಲಾಗುವ ಪ್ರಾಪ್ಯಗಳ ಮೇಲಣ ಸಾಲಸೌಲಭ್ಯದಲ್ಲಿ ಕನಿಷ್ಠ 25%ರಷ್ಟು ಹುಂಡಿ ವಟಾವಣೆ ಸೌಲಭ್ಯದ ರೂಪದಲ್ಲಿರಬೇಕು.

2 ಎಲ್ಲ ಉದರಿ ಪ್ರಾಧಿಕರಣ ಸಾಲಗಾರರು ತಮ್ಮ ಉದರಿ ಖರೀದಿಯ ಪ್ರತಿಶತ 25ರಷ್ಟನ್ನು ಹುಂಡಿ ಒಪ್ಪಿಗೆ ಮೂಲಕ ಮಾಡತಕ್ಕದ್ದು. ಈಗಾಗಲೇ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಹುಂಡಿ ಒಪ್ಪಿಗೆ ಖರೀದಿ ಮಾಡುತ್ತಿದ್ದಲ್ಲಿ ಆ ಪ್ರಮಾಣ ಇಳಿಯದಂತೆ ನೋಡಿಕೊಳ್ಳಬೇಕು. ಈ ಬಗ್ಗೆ ಬ್ಯಾಂಕುಗಳು ತಮ್ಮ ಸಾಲಗಾರರಿಂದ ಮಾಹಿತಿಗಳನ್ನು ಪ್ರತಿ ವರ್ಷವೂ ತರಿಸಿಕೊಳ್ಳಬೇಕು.

3. ಹುಂಡಿ ವಟಾವಣೆ ದರ ಶೇ. 15.5%ನ್ನು ಮೀರಬಾರದು. ಇದು ಸಾಲಗಾರರ ಮೇಲಣ ಗರಿಷ್ಠ ಬಡ್ಡಿ ದರಕ್ಕಿಂತ ಶೇ. 1ರಷ್ಟು ಕಡಿಮೆ.

4 ಉದರಿ ಪ್ರಾಧಿಕರಣದ ಅಡಿ ಬರುವ ಸಾಲಗಾರರಿಗೆ ಮೂರು ತಿಂಗಳಿಗೆ ಮೀರದಂತೆ ಅವರ ಹುಂಡಿ ಮಿತಿಯ ಶೇ. 10ರಷ್ಟು, ಗರಿಷ್ಠ ರೂ. 1 ಕೋಟಿ, ತಾತ್ಕಾಲಿಕ ಹುಂಡಿ ಮಿತಿ ನೀಡಲು ಬ್ಯಾಂಕುಗಳಿಗೆ ವಿವೇಚನಾಧಿಕಾರ ನೀಡಿಕೆ.

5 ಅನುಸೂಚಿತ ವಾಣಿಜ್ಯ ಬ್ಯಾಂಕುಗಳಿಗೆ ಅವು ಹೊಂದಿದ 182 ದಿನಗಳ ಅವಧಿಯ ಖಜಾನೆ ಹುಂಡಿಗಳ ಮೇಲೆ, ಶೇ. 10ರ ದರದಲ್ಲಿ ಶೇ. 50ರಷ್ಟು ಪುನರ್ಧನ ಸೌಲಭ್ಯ ವಿಸ್ತರಣೆ.



---

ಸಾರ್ವಜನಿಕ ವಲಯದ ಜಂಟಿ ಪ್ರಚಾರ ಸಮಿತಿಯ ಹೇಳಿಕೆಯ ಪ್ರಕಾರ 1987ರಲ್ಲಿ ದೇಶದ 28 ಸಾರ್ವಜನಿಕ ವಲಯ ಬ್ಯಾಂಕುಗಳ ಸಾಧನೆ ತೃಪ್ತಿಕರ. ಶಾಖಾ ವಿಸ್ತರಣೆ, ಮೀಸಲುಗಳು, ನಿಧಿಗಳು—ಎಲ್ಲ ದೃಷ್ಟಿಗಳಿಂದಲೂ ಇವು ಪ್ರಗತಿ ಸಾಧಿಸಿವೆ. ಇವುಗಳ ಜಾಗತಿಕ ಠೇವಣಿಗಳು ರೂ. 16,808ರ ಕೋಟಿಯಷ್ಟು ಅಧಿಕವಾದುವು. ಸ್ಥೂಲಬೆಳವಣಿಗೆ ದರ 15%. ಬಾಕಿಯಿರುವ ಮುಂಗಡಗಳು ರೂ. 64,321 ಕೋಟಿಯಿಂದ (1986) ರೂ. 73,114 ಕೋಟಿಗೆ ಏರಿವೆ. ಇದು ಶೇ. 14%ರ ಹೆಚ್ಚಳ.

ಬ್ಯಾಂಕ್ ಶಾಖಾ ವಿಸ್ತರಣೆಯ ವೇಗವೂ ಹೆಚ್ಚಿದೆ. ದೇಶದೊಳಗೆ 817 ಹೊಸ ಶಾಖೆಗಳ ಸ್ಥಾಪನೆಯಾಗಿದೆ. 1986ರಲ್ಲಿ ಆರಂಭವಾದ ಹೊಸ ಶಾಖೆಗಳ ಸಂಖ್ಯೆ 302. 1986ರಲ್ಲಿ ದೇಶದಲ್ಲಿ ಸಾರ್ವಜನಿಕ ವಲಯದ ಬ್ಯಾಂಕುಗಳ 36,304 ಶಾಖೆಗಳಿದ್ದವು. 1987ರಲ್ಲಿ ಇವುಗಳ ಸಂಖ್ಯೆ 37,121ಕ್ಕೆ ಏರಿದೆ. ವಿದೇಶಿ ಶಾಖೆಗಳ ಸಂಖ್ಯೆ 139.

ಬಂಡವಾಳದ ತಳ ವಿಸ್ತರಿಸಿದೆ: ರೂ. 990.5 ಕೋಟಿಯಿಂದ ರೂ. 1,181.2 ಕೋಟಿಗೆ ಏರಿದೆ. ಮೀಸಲುಗಳು ಮತ್ತು ಮೀಸಲು ನಿಧಿಗಳು ರೂ. 1,094 ಕೋಟಿಯಿಂದ ರೂ. 1,502.8 ಕೋಟಿಗೆ ಹೆಚ್ಚಿವೆ. ಪ್ರಕಟಿತ ಲಾಭಗಳು ರೂ. 192.5 ಕೋಟಿಯಿಂದ ರೂ. 261.7 ಕೋಟಿಗೆ ಏರಿವೆ. ಪ್ರತಿ ಉದ್ಯೋಗಿಗೆ ಠೇವಣಿಯ ಪ್ರಮಾಣ 13.72 ಲಕ್ಷದಿಂದ 15.53 ಲಕ್ಷಕ್ಕೆ ಏರಿದೆ. ತಲಾ ಉದ್ಯೋಗಿಗೆ ಮುಂಗಡಗಳ ಪ್ರಮಾಣ 7.92 ಲಕ್ಷದಿಂದ 8.84 ಲಕ್ಷಕ್ಕೆ ಹೆಚ್ಚಿದೆ. ಬ್ಯಾಂಕ್ ಠೇವಣಿಗಳು ರಾಷ್ಟ್ರೀಯ ವರಮಾನದ ಶೇ. 40ರಷ್ಟರ ಪ್ರಮಾಣದಲ್ಲಿ ಅಧಿಕವಾಗಿವೆ. ಆದ್ಯತಾವಲಯದ ಪ್ರಾಮುಖ್ಯವೂ ಅಧಿಕವಾಗಿದೆ.

# ಸಾಲ ಖಾತೆಗಳ ಸ್ವಾಸ್ಥ್ಯ ಸಂಕೇತ ವ್ಯವಸ್ಥೆ ಮತ್ತು ಉದರಿ ಉಸ್ತುವಾರಿ

**ಬ್ಯಾಂಕಿನ ಆಸ್ತಿಗಳಲ್ಲಿ ಮುಂಗಡಗಳು ಮುಖ್ಯ ಭಾಗವಾದ್ದರಿಂದ ಉದರಿ ಉಸ್ತುವಾರಿಗೆ ಬ್ಯಾಂಕುಗಳು ಮಹತ್ವ ನೀಡಬೇಕಾದ್ದು ಅನಿವಾರ್ಯ. ಉದರಿ ಉಸ್ತುವಾರಿ ಪರಿಣಾಮಕಾರಿ ಆಗಬೇಕಾದರೆ ಮುಂಗಡಗಳ ಸ್ಥಿತಿಯ ಸ್ಪಷ್ಟ ಅರಿವು ಬ್ಯಾಂಕರನಿಗೆ ಇರಬೇಕು.**

**ಬಿ. ಎಸ್. ಚಂದ್ರಶೇಖರ**

**ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್ ರಾಯಚೂರು**

ಬ್ಯಾಂಕ್ ಸಾಲಗಳು ಮರುಪಾವತಿಯಾಗದಿರುವ ಸಂದರ್ಭಗಳು ವಿರಳವಾಗಿದ್ದಾಗ ಅವುಗಳ ಗುಣ ಮಟ್ಟವನ್ನು ಆಧರಿಸಿದ ವರ್ಗೀಕರಣ ಒಂದು ಸಮಸ್ಯೆಯೆನಿಸಿರಲಿಲ್ಲ. ನಾನಾ ಕಾರಣಗಳಿಂದ ಅನೇಕ ಸಾಲಗಳ ಮರುಪಾವತಿಯ ಬಗೆಗೆ ಬ್ಯಾಂಕುಗಳಿಗೆ ಸಂಶಯ ಮೂಡುವ ಸ್ಥಿತಿ ಒದಗಿ ಬಂದಿರುವ ಈ ಸಂದರ್ಭದಲ್ಲಿ ಬ್ಯಾಂಕ್ ಸಾಲಗಳ ಸ್ವಾಸ್ಥ್ಯ ಸ್ಥಿತಿ ಸೂಚಿಸುವ ವ್ಯವಸ್ಥೆಯೊಂದು ನೆಲೆಗೊಳ್ಳಬೇಕಾದುದು ಅಗತ್ಯವೆನಿಸಿದೆ.

## ಎರಡು ವರ್ಷ ಹಿಂದೆ

ಬ್ಯಾಂಕುಗಳ ಪರಿವೀಕ್ಷಣ ವರದಿಗಳ ಆಧಾರದಿಂದ, ಬ್ಯಾಂಕುಗಳಲ್ಲಿ ಸಮಗ್ರವಾದ ಹಾಗೂ ಏಕ ರೂಪದ ಉದರಿ ಉಸ್ತುವಾರಿ ವ್ಯವಸ್ಥೆ ಒಂದು ತುರ್ತು ಅಗತ್ಯವೆಂದು ಮನಗಾಣಲಾಗಿದೆ. ಇಂಥ ವ್ಯವಸ್ಥೆ ಬ್ಯಾಂಕ್ ವ್ಯವಸ್ಥಾಪಕ ವರ್ಗಕ್ಕೆ ತಮ್ಮ ಮುಂಗಡಗಳ ವಿಭಾಗದ ಸ್ವಾಸ್ಥ್ಯ ಮತ್ತು ಒಟ್ಟು ಮುಂಗಡಗಳಿಗೆ ಸಂಬಂಧಿಸಿದಂತೆ ಆತಂಕಕ್ಕೆ ಕಾರಣವಾಗಬಹುದಾದ ಮುಂಗಡಗಳ ಪ್ರಮಾಣವನ್ನು ಕುರಿತ ಮಾಹಿತಿಯನ್ನು ಒದಗಿಸುವಂತಿರಬೇಕು. ಈ ಮಾಹಿತಿಯು ನಿಯಂತ್ರಣ ಮತ್ತು ನೀತಿರೂಪಣ ಕ್ರಿಯೆಗಳಲ್ಲಿ ಬ್ಯಾಂಕ್ ವ್ಯವಸ್ಥಾಪಕ ವರ್ಗಕ್ಕೆ ಅತ್ಯಂತ ಉಪಯುಕ್ತವಾಗುತ್ತದೆ. ಈ ದೃಷ್ಟಿಯಿಂದ ರಿಸರ್ವ್ ಬ್ಯಾಂಕ್ 1986ರ ಆರಂಭದಲ್ಲಿ 'ಸಾಲಗಳ ಸ್ವಾಸ್ಥ್ಯ ಸಂಕೇತ ವ್ಯವಸ್ಥೆ'ಯನ್ನು (Health Code System) ರಚಿಸಿತು.

ಬ್ಯಾಂಕ್ ಸಾಲಗಳನ್ನು; ಅವು ಮರುಪಾವತಿಯಾಗುವ ಸಾಧ್ಯತೆಗಳನ್ನು ದೃಷ್ಟಿಯಲ್ಲಿರಿಸಿ, ತೃಪ್ತಿಕರ ಸಾಲಗಳಿಂದ ಹಿಡಿದು ಕರಡು ಮತ್ತು ಸಂದಿಗ್ಧ ಸಾಲಗಳ ವರೆಗೆ, ಎಂಟು ಗುಂಪುಗಳನ್ನಾಗಿ ವಿಂಗಡಿಸಿ, ಒಂದೊಂದಕ್ಕೂ ಒಂದೊಂದು ಸ್ವಾಸ್ಥ್ಯ ಸಂಕೇತ ಸಂಖ್ಯೆ ನೀಡುವುದು ಈ ವ್ಯವಸ್ಥೆಯ ಮುಖ್ಯಾಂಶ. ವ್ಯವಸ್ಥೆಯ ಇತರ ವಿವರಗಳನ್ನೂ, ಬ್ಯಾಂಕುಗಳು ಈ ನಿಟ್ಟಿನಲ್ಲಿ ಇಡಬೇಕಾದ ಪುಸ್ತಕಗಳ ನಮೂದುಗಳನ್ನೂ ರಿಸರ್ವ್ ಬ್ಯಾಂಕಿನ ಸುತ್ತೋಲೆ ಬ್ಯಾಂಕುಗಳಿಗೆ ಬಿತ್ತರಿಸಿದೆ.

ಎಲ್ಲ ಸಾಲಖಾತೆಗಳಿಗೂ ಸಂಕೇತ ಸಂಖ್ಯೆ ನೀಡಬೇಕು. ಹಾಗೆ ನೀಡುವಲ್ಲಿ ರಿಸರ್ವ್ ಬ್ಯಾಂಕಿನ ಕೆಲವು ಆದೇಶಗಳನ್ನು ಗಮನಿಸಬೇಕು.

1 ಸಾಲವೊಂದನ್ನು ಮಂಜೂರು ಮಾಡುವ ಪ್ರಾಧಿಕಾರಿಯೇ ಆ ಸಾಲಕ್ಕೆ ಸ್ವಾಸ್ಥ್ಯ ಸಂಕೇತ ಸಂಖ್ಯೆ ನೀಡಬೇಕು. ಶಾಖಾ ವ್ಯವಸ್ಥಾಪಕರಿಗಿಂತ ಹಿರಿಯ ಅಧಿಕಾರಿ ಸಾಲ ಮಂಜೂರು ಮಾಡಿದ್ದರೆ ಶಾಖಾ ವ್ಯವಸ್ಥಾಪಕರ ಶಿಫಾರಸಿನ ಮೇಲೆ ಸಂಖ್ಯೆ ನೀಡಬೇಕು.

2 ಹೀಗೆ ನೀಡಲಾದ ಸಂಖ್ಯೆಯನ್ನು ಅವರ ಮೇಲಧಿಕಾರಿ ದೃಢೀಕರಿಸಬೇಕು.

3 ಅರ್ಧವಾರ್ಷಿಕವಾಗಿ ಖಾತೆಗಳ ಸ್ಥಿತಿಯ ಮರುಪರಿಶೀಲನೆ ನಡೆಸಿ ಅಗತ್ಯವಾದಲ್ಲಿ ಬೇರೆ ಸಂಖ್ಯೆ ನೀಡಬೇಕು.

ತಮ್ಮ ಪರಿಶೋಧನೆಯ ಸಮಯದಲ್ಲಿ (ಮುಖ್ಯವಾಗಿ ದೊಡ್ಡ ಮೊತ್ತದ ಸಾಲ ಖಾತೆಗಳ) ವರ್ಗೀಕರಣದ ಸಮರ್ಪಕತೆಯನ್ನು ಶಾಖಾ ಲೆಕ್ಕಪರಿಶೋಧಕರು ಮತ್ತು ಪರಿನಿಯತ ಲೆಕ್ಕಪರಿಶೋಧಕರು ಪರಿಶೀಲಿಸುತ್ತಾರೆ.

ಶಾಖೆಗಳು 'ಸ್ವಾಸ್ಥ್ಯ ಸಂಕೇತ ಪುಸ್ತಕ'ವೊಂದನ್ನು ಇಡಬೇಕು. ಈ ಪುಸ್ತಕದಲ್ಲಿ ಪ್ರತಿಯೊಂದು ಸ್ವಾಸ್ಥ್ಯಸಂಕೇತ ಸಂಖ್ಯೆಯಡಿ ಬರುವ ಸಾಲಖಾತೆಗಳಿಗೆ ಸಂಬಂಧಿಸಿದ ಈ ಮುಂದಿನ ವಿವರಗಳನ್ನು ದಾಖಲಿಸಬೇಕು :

(1) ಸಾಲಗಾರನ ಹೆಸರು, (2) ಸೌಲಭ್ಯದ ಬಗೆ (type of facility), (3) ಮಿತಿ, (4) ಡ್ರಾಯಿಂಗ್ ಪರಿಮಿತಿ, (5) ಬಾಕಿ, (6) ಈ ಸ್ವಾಸ್ಥ್ಯಸಂಕೇತ ನೀಡಲು ಕಾರಣಗಳು ಮತ್ತು (7) ನೀಡಿದ ಸಂಕೇತವನ್ನು ನಿಯಂತ್ರಣಾಧಿಕಾರಿ ದೃಢೀಕರಿಸಿದ ದಿನಾಂಕ.

ಪುಸ್ತಕದ ಹಾಳೆಗಳು ದ್ವಿಪ್ರತಿಮಾಡಲು ಅನುವಾಗುವಂತಿದ್ದು, ಒಂದು ಪ್ರತಿಯನ್ನು ನಿಯಂತ್ರಣ ಕಛೇರಿಗೆ ಕಳಿಸಿಕೊಡಬೇಕು.

ಒಂದು ಲಕ್ಷ ರೂ.ಗಳಿಗಿಂತ ಹೆಚ್ಚಿನ ಬಾಕಿಯುಳ್ಳ ಖಾತೆಗಳನ್ನು 31-12-1985ರಲ್ಲಿದ್ದಂತೆ ವರ್ಗೀಕರಿಸುವ ಮೂಲಕ ಈ ವ್ಯವಸ್ಥೆಯನ್ನು ಭಾಗಶಃ ಪೂರ್ವಾನ್ವಯವಾಗಿ ಜಾರಿಗೆ ತರಬೇಕೆಂದು ರಿಸರ್ವ್ ಬ್ಯಾಂಕ್ ಸುತ್ತೋಲೆ ಸೂಚಿಸಿತ್ತು.

ಆದರೂ ಬ್ಯಾಂಕುಗಳು ಈ ವಿಷಯವನ್ನು ಅಷ್ಟು ಗಂಭೀರವಾಗಿ ಪರಿಗಣಿಸಿದಂತೆ ಕಾಣಲಿಲ್ಲ. ಕೊನೆಗೆ ಒಂದು ಲಕ್ಷ ರೂಪಾಯಿಗಳಿಗಿಂತ ಅಧಿಕ ಮೊತ್ತದ ಸಾಲದ ಖಾತೆಗಳಿಗೆ ಸಂಕೇತ ಸಂಖ್ಯೆ ನೀಡಬೇಕೆಂಬ ಒತ್ತಡ ಹೆಚ್ಚತೊಡಗಿ 1986ರ ಕೊನೆಯ ಹೊತ್ತಿಗೆ ಆ ಕೆಲಸವಾಗಿದೆಯೆಂಬ ದೃಢೀಕರಣಗಳು ಶಾಖೆಗಳಿಂದ ಹೊರಟವು. ಒಟ್ಟಾರೆ ನಿರೀಕ್ಷಿಸಿದ ಬದಲಾವಣೆ ಉಂಟಾಗದೆ ಯಥಾ ಸ್ಥಿತಿಯ ವಿಜೃಂಭಣೆ.

## ಖಚಿತ ವರ್ಗೀಕರಣಕ್ಕೆ ನೆರವಾಗುವ ಸೂಚನೆಗಳು

ರಿಸರ್ವ್ ಬ್ಯಾಂಕಿನ ಸುತ್ತೋಲೆಯ ಸ್ಪಷ್ಟ ಸೂಚನೆಗಳು ಸ್ವಾಸ್ಥ್ಯಸಂಕೇತ ಸಂಖ್ಯೆ ನೀಡುವಲ್ಲಿ ಎದು ರಾಗಬಹುದಾದ ಸಂಶಯಗಳನ್ನು ನಿವಾರಿಸುತ್ತದೆ ಅವುಗಳನ್ನು ಸಂಕ್ಷೇಪವಾಗಿ ನೋಡಬಹುದು.

## ತೃಪ್ತಿಕರ ಖಾತೆಗಳು

**ಸ್ವಾಸ್ಥ್ಯ ಸಂಕೇತ ಸಂಖ್ಯೆ 1 :** ಖಾತೆಯ ನಿರ್ವಹಣೆ ತೃಪ್ತಿಕರವಾಗಿದ್ದು, (ಸರಕುಪಟ್ಟಿ ಖಾತೆಯ ಮರುಪರಿಶೀಲನೆಗೆ ಅಗತ್ಯವಾದ ಆಸ್ತಿ ಹೊಣೆ ತಃಖ್ತೆ ಮುಂತಾದವುಗಳನ್ನು ಸಕಾಲಿಕವಾ ಸಲ್ಲಿಸುವುದೇ ಮೊದಲಾದ) ಎಲ್ಲ ನಿಯಮ

ನಿಬಂಧನೆಗಳಿಗೂ ಅನುಗುಣವಾಗಿರುವಂಥ, ಸಾಲಗಾರನ ಎಲ್ಲ ಖಾತೆಗಳೂ ಸಕ್ರಮವಾಗಿರತಕ್ಕ ಮತ್ತು ಸುರಕ್ಷೆಯ ವಿಷಯದಲ್ಲಿ ಸಂದೇಹವಿಲ್ಲದಂಥ ಸಾಲಗಳು.

**ಸ್ವಾಸ್ಥ್ಯ ಸಂಕೇತ ಸಂಖ್ಯೆ 2 :** ಕ್ರಮತಪ್ಪಿದ ಖಾತೆಗಳು, ಸಾಲಗಳ ಸುರಕ್ಷೆ ಕುರಿತು ಅನುಮಾನವಿಲ್ಲದಿದ್ದರೂ ಅಲ್ಪಾವಧಿ ಸ್ವರೂಪದ ಕ್ರಮರಾಹಿತ್ಯ (irregularity) ಕಂಡುಬರುವ ಖಾತೆಗಳು. ಉದಾ :

(i) ಡ್ರಾಯಿಂಗ್ ಪರಿಮಿತಿಯನ್ನು ಮೀರಿದ ಶಿಲ್ಕು ಒಂದು ಕಿರುಅವಧಿಯಲ್ಲಿ ಮಾತ್ರ ಇರುವಂಥ ಖಾತೆಗಳು. ಪದೇಪದೇ ಹೆಚ್ಚುವರಿ ಡ್ರಾಯಿಂಗ್ ಇರುವ ಖಾತೆಗಳನ್ನು ಈ ಗುಂಪಿಗೆ ಸೇರಿಸಬಾರದು.

(ii) ಅವಧಿಸಾಲದ ವಿಷಯದಲ್ಲಿ ಆರು ತಿಂಗಳಿಗಿಂತ ಕಡಿಮೆ ಅವಧಿಯ ಕಂತುಗಳ ಕಟಬಾಕಿ, ಉದರಿ ಪತ್ರದಡಿಯ ಆಮದು ಹುಂಡಿಯ ಮತ್ತು ಮುಂದೂಡಿದ ಪಾವತಿ ಖಾತರಿಯಡಿಯ ಕಂತುಗಳಾದರೆ ಮೂರು ತಿಂಗಳಿಗಿಂತ ಕಡಿಮೆ ಅವಧಿಯ ಕಂತುಗಳ ಕಟಬಾಕಿ ಇರುವ ಖಾತೆಗಳು, ಇತ್ಯಾದಿ.

**ಸ್ವಾಸ್ಥ್ಯ ಸಂಕೇತ ಸಂಖ್ಯೆ 3 :** ಅಸ್ವಸ್ಥ–ಜೀವಂತಿಕೆಯುಳ್ಳದ್ದು/ಶುಶ್ರೂಷೆಯಲ್ಲಿರುವುದು.

ಪುನರುಜ್ಜೀವನ ಅಥವಾ ಶುಶ್ರೂಷೆ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿರುವಂಥ ಘಟಕಗಳ ಖಾತೆಗಳು ಈ ಗುಂಪಿಗೆ ಸೇರುತ್ತವೆ.

**ಸ್ವಾಸ್ಥ್ಯ ಸಂಕೇತ ಸಂಖ್ಯೆ 4 :** ಅಸ್ವಸ್ಥ–ಜೀವಂತಿಕೆಯಿಲ್ಲದ್ದು/ಕರಡುಸಾಧ್ಯ (sticky)

ಆರು ತಿಂಗಳು ಮತ್ತು ಅದಕ್ಕೂ ಹೆಚ್ಚಿನ ಕಾಲ ಕ್ರಮರಾಹಿತ್ಯ ಮುಂದುವರಿದಿದ್ದು ಸದ್ಯದಲ್ಲೇ ಸಕ್ರಮಗೊಳ್ಳುವ ಪ್ರತೀಕ್ಷೆಯಿಲ್ಲದಂಥ ಖಾತೆಗಳು. ಅಲ್ಲದೆ ಈ ಖಾತೆಗಳು ಸುಪ್ತ ಅಸ್ವಾಸ್ಥ್ಯದ ಸಾಮಾನ್ಯ ಸೂಚನೆಗಳನ್ನು ತೋರಬಹುದು. ಪುನರುಜ್ಜೀವನ ಕಾರ್ಯಕ್ರಮ ಕೈಗೊಳ್ಳದ ಜೀವಂತಿಕೆ (viability) ಇಲ್ಲದ ಎಲ್ಲ ಅಸ್ವಸ್ಥ ಘಟಕಗಳೂ ಈ ಗುಂಪಿಗೆ ಸೇರುತ್ತವೆ.

ಇಲ್ಲಿ ಸುಪ್ತ ಅಸ್ವಸ್ಥತೆಯ ಸೂಚನೆಗಳ ಒಂದು ದೀರ್ಘಪಟ್ಟಿಯನ್ನು ರಿಸರ್ವ್ ಬ್ಯಾಂಕಿನ ಸುತ್ತೋಲೆ ನೀಡಿದೆ; ಅವುಗಳಲ್ಲಿ ಕೆಲವನ್ನು ಉದಾಹರಣಾರ್ಥವಾಗಿ ನೋಡಬಹುದು :

(i) ಖಾತೆಯಲ್ಲಿ ವಹಿವಾಟುಗಳು ಇಲ್ಲದಿರುವುದರಿಂದ ಅಥವಾ ಅತ್ಯಲ್ಪ ವಹಿವಾಟುಗಳಿಂದ ಸೂಚಿತವಾಗುವ ಸ್ಥಗಿತತೆ.

(ii) ಅವಧಿ ಸಾಲದ ಆರು ಅಥವಾ ಹೆಚ್ಚು ಮಾಸಿಕ ಕಂತುಗಳ ಬಾಕಿ.

(iii) ಘಟಕದ ಪರಿವೀಕ್ಷಣೆಯ ಸಮಯದಲ್ಲಿ ಗಮನಿಸಲಾದ ಕಡಿಮೆ ಅಥವಾ ಅತ್ಯಲ್ಪ ಮಟ್ಟದ ಉತ್ಪಾದನ/ಮಾರಾಟ ಚಟುವಟಿಕೆ ಅಥವಾ ವ್ಯವಹಾರದ ನಿಲುಗಡೆ.

(iv) ಕೆಲಸಗಾರರಿಗೆ ಮಜೂರಿ, ಕಛೇರಿ/ಕಾರ್ಖಾನೆ ಆವರಣದ ಬಾಡಿಗೆ, ವಿದ್ಯುತ್ ಶುಲ್ಕ, ಪರಿನಿಯತ ಬಾಕಿಗಳೇ ಮುಂತಾದವುಗಳನ್ನು ಪಾವತಿ ಮಾಡದಿರುವಂಥ ದ್ರವತ್ವದ ಮೇಲಣ ಒತ್ತಡ, ಇತ್ಯಾದಿ.

**ಸ್ವಾಸ್ಥ್ಯ ಸಂಕೇತ ಸಂಖ್ಯೆ 5 :** ಒಂದಕ್ಕೆ ಕರೆಯಲಾದ ಸಾಲಗಳು (Recalled debts). ಮರುಪಾವತಿ ಸಂಶಯಾಸ್ಪದವಾಗಿರುವ ಮತ್ತು ಶುಶ್ರೂಷೆ ಅನುಪಯುಕ್ತ ಎಂದು ಭಾವಿಸಲಾದ ಖಾತೆಗಳನ್ನು ಈ ವರ್ಗಕ್ಕೆ ಸೇರಿಸಬೇಕು. ಸಾಲವನ್ನು ಹಿಂದೆ ಕರೆಯಬೇಕೆಂಬ ನಿರ್ಧಾರ ತೆಗೆದುಕೊಂಡ (ಅಥವಾ ತೆಗೆದುಕೊಳ್ಳುವ ಸಾಧ್ಯತೆಯಿರುವ) ಖಾತೆಗಳು ಈ ಗುಂಪಿಗೆ ಸೇರುತ್ತವೆ.

**ಸ್ವಾಸ್ಥ್ಯ ಸಂಕೇತ ಸಂಖ್ಯೆ 6 :** ದಾವೆ ಹೂಡಲಾದ ಖಾತೆಗಳು. ಈ ವರ್ಗದಲ್ಲಿ ಕಾನೂನುಕ್ರಮ ಅಥವಾ ಸಾರ್ವಜನಿಕ ಸಾಲ ವಸೂಲಾತಿ ಅಧಿನಿಯಮದಂತೆ ವಸೂಲಾತಿ ಪ್ರಕ್ರಿಯೆ ಆರಂಭಿಸಿರುವ ಖಾತೆಗಳು ಸಮಾವೇಶಗೊಳ್ಳುತ್ತವೆ. ದಾವೆ ಹೂಡಿ ಡಿಕ್ರಿಯಾದ ಖಾತೆಗಳು ಈ ಗುಂಪಿಗೆ ಸೇರುವುದಿಲ್ಲ.

**ಸ್ವಾಸ್ಥ್ಯ ಸಂಕೇತ ಸಂಖ್ಯೆ 7 :** ಡಿಕ್ರಿಯಾದ ಖಾತೆಗಳು. ಈ ಗುಂಪಿಗೆ ಸೇರುವ ಖಾತೆಗಳೆಂದರೆ ದಾವೆಗಳನ್ನು ಹೂಡಲಾಗಿದ್ದು ಡಿಕ್ರಿ ಪಡೆದ ಖಾತೆಗಳು.

(ಸಂಕೇತ 6 ಮತ್ತು 7ರ ಅಡಿ ಖಾತೆಗಳ ಪುನರ್ವರ್ಗೀಕರಣವೂ ಇದೆ.)

**ಸ್ವಾಸ್ಥ್ಯ ಸಂಕೇತ ಸಂಖ್ಯೆ 8 :** ಕರಡು ಮತ್ತು ಸಂದಿಗ್ಧ ಸಾಲಗಳು. ಸಂಕೇತ ಸಂಖ್ಯೆ 3ರಿಂದ 7ರ ಅಡಿ ಬರುವ ಖಾತೆಗಳಲ್ಲಿ (ಭದ್ರತೆಯ ಮೌಲ್ಯದ ಕೊರತೆಯೇ ಮುಂತಾದವುಗಳಿಂದಾಗಿ) ಬ್ಯಾಂಕಿಗೆ ಬರಬೇಕಾದ ಬಾಕಿಗಳ ವಸೂಲಾತಿ ಸಂಪೂರ್ಣವಾಗಿ ಅಥವಾ ಭಾಗಶಃ, ಸಂದೇಹಾಸ್ಪದವಾಗಿರುವಂಥ ಎಲ್ಲ ಮುಂಗಡ ಖಾತೆಗಳೂ ಈ ಸಂಕೇತದ ಅಡಿ ಬರುತ್ತವೆ. ಸ್ವಾಸ್ಥ್ಯಸಂಕೇತ 8ರಲ್ಲಿ ತೋರಿಸಲಾಗುವ ಇಂಥ ಮುಂಗಡಗಳನ್ನು 3ರಿಂದ 7ರವರೆಗಿನ ಸಂಕೇತಗಳಲ್ಲಿ ವರ್ಗೀಕರಿಸಬಾರದು. ಎಂದರೆ, ಸೂಚಿಸಲಾದ ಇತರ ಲಕ್ಷಣಗಳೇನೇ ಇರಲಿ, ಪೂರ್ಣವಸೂಲಾತಿಯ ಭರವಸೆ ಇರುವಂಥ ಖಾತೆಗಳನ್ನು ಮಾತ್ರ ಸಂಕೇತ 3ರಿಂದ 7ರಲ್ಲಿ ತೋರಿಸಬೇಕು.

ಖಾತೆದಾರನೊಬ್ಬ ಒಂದಕ್ಕಿಂತ ಹೆಚ್ಚು ಸಾಲ ಖಾತೆಗಳನ್ನು ಹೊಂದಿರುವ ಸಂದರ್ಭದಲ್ಲಿ ಎರಡೂ ಖಾತೆಗಳನ್ನು ಪರಿಶೀಲಿಸಿ ಎರಡಕ್ಕೂ ಒಂದೇ ಸಂಕೇತ ನೀಡುವುದು ಅಗತ್ಯ. ಪ್ರತಿಯೊಂದು ಸಾಲಖಾತೆಗೂ ಸಂಕೇತ ನೀಡಬೇಕು. ಮತ್ತು ಒಂದು ಖಾತೆಗೆ ಒಂದೇ ಸಂಕೇತ. ಇಲ್ಲಿ ಅತಿವ್ಯಾಪ್ತಿಗೆ (overlapping) ಅವಕಾಶವಿಲ್ಲ.

ಬೇರೆ ಕಾರಣಗಳಿಂದ ವರ್ಗೀಕರಣ ತಪ್ಪಾಗುವ ಸಾಧ್ಯತೆಯಿದೆಯಾದರೂ ಮಾರ್ಗದರ್ಶಿ ಸೂಚನೆಗಳಂತೂ ಸ್ಪಷ್ಟವಾಗಿವೆ.

## ವ್ಯವಸ್ಥೆಗೆ ಹೊಸ ಜೀವ

ಬ್ಯಾಂಕ್ ಶಾಖೆಗಳು ತಮ್ಮ ಮುಂಗಡಗಳ ಸ್ಥಿತಿಯನ್ನು ವರ್ಷಾಂತ್ಯದಲ್ಲಿ ವರದಿ ಮಾಡುವ ವ್ಯವಸ್ಥೆ ಮೊದಲಿನಿಂದಲೂ ಇದ್ದದ್ದೇ. ಈ ವ್ಯವಸ್ಥೆಯಲ್ಲಿಯೇ ಸ್ವಾಸ್ಥ್ಯಸಂಕೇತ ವ್ಯವಸ್ಥೆಯನ್ನು ಅಳವಡಿಸಲು ರಿಸರ್ವ್ ಬ್ಯಾಂಕ್ ಆಲೋಚಿಸಿತು. ವರ್ಷಾಂತ್ಯದಲ್ಲಿ ಮುಂಗಡಗಳ ವಿವರಗಳನ್ನು ವರದಿಮಾಡಲು ಒಂದೊಂದು ಸ್ವಾಸ್ಥ್ಯ ಸಂಕೇತ ಸಂಖ್ಯೆಗೆ ಒಂದೊಂದರಂತೆ ಎಂಟು ನಮೂನೆಗಳನ್ನು ಸೂಚಿಸಿತು. ಹಲವು ಬ್ಯಾಂಕುಗಳು ಮೊದಲ ಬಾರಿಗೆ ಈ ನಮೂನೆಗಳನ್ನು ಅನುಸರಿಸಿ, 1987ರ ಅಂತ್ಯದಲ್ಲಿದ್ದಂತೆ, ತಮ್ಮ ಮುಂಗಡಗಳನ್ನು ಕುರಿತ ವಾರ್ಷಿಕ ವರದಿಯನ್ನು ಸಲ್ಲಿಸಿದವು. ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ ಏಳು ಸಹವರ್ತಿಗಳು ಈ ಬ್ಯಾಂಕುಗಳಲ್ಲಿ ಪ್ರಮುಖವಾದವು. ವರ್ಷಾಂತ್ಯದ ಮುಂಗಡಗಳ ವರದಿ ಸಲ್ಲಿಕೆ ಕಡ್ಡಾಯವಾಗಿದ್ದು ಅದರಲ್ಲೇಸ್ವಾಸ್ಥ್ಯ ಸೂಚಿ ವ್ಯವಸ್ಥೆಯ ಅಂಶಗಳನ್ನು ಮೇಳೈಸುವ ರಿಸರ್ವ್ ಬ್ಯಾಂಕಿನ ಆಶಯ ನೆರವೇರುವುದು ಕಷ್ಟವಲ್ಲ. ಆದ್ದರಿಂದ ಕೇವಲ ಸುತ್ತೋಲೆಗಳಲ್ಲಿ ಜೀವಂತವಾಗಿದ್ದ ಈ ವ್ಯವಸ್ಥೆಗೆ ಹೊಸ ಜೀವ ಬಂದಂತಾಗಿದೆ. ಪ್ರಚಲಿತ ವಿದ್ಯಮಾನಗಳನ್ನು ಗಮನಿಸಿದರೆ ಈ ವ್ಯವಸ್ಥೆಯನ್ನು ಬಲಗೊಳಿಸಲು ರಿಸರ್ವ್ ಬ್ಯಾಂಕ್ ದೃಢ ನಿಶ್ಚಯ ಮಾಡಿರುವುದೆಂದು ಅರ್ಥವಾಗುತ್ತದೆ.

## ಅನುಕೂಲತೆಗಳು

ಮುಂಗಡಗಳಲ್ಲಿ ಆತಂಕಕ್ಕೆ ಕಾರಣವಾಗುವಂಥವುಗಳನ್ನು ಕುರಿತ ಮಾಹಿತಿಯನ್ನು ಬ್ಯಾಂಕ್ ವ್ಯವಸ್ಥಾಪಕವರ್ಗಗಳಿಗೆ ದೊರಕಿಸಬೇಕೆಂಬ ಈ ಹೊಸ ವ್ಯವಸ್ಥೆಯ ಆಶಯ ಪೂರ್ಣವಾಗಿದೆ. ಉದರಿ ಉಸ್ತುವಾರಿಯಲ್ಲಿ ಇದೊಂದು ಸಮರ್ಥ ಉಪಕರಣವಾಗಬಲ್ಲದು. ಮುಖ್ಯವಾಗಿ ನಿಯಂತ್ರಣ ಕಛೇರಿಗಳಿಗೆ ಶಾಖೆಗಳ ಮುಂಗಡ ವಿಭಾಗಗಳ ಸ್ಥಿತಿ ವಿವರಣ ನೀಡುವಲ್ಲಿ ಯಶಸ್ವಿಯಾಗಿದ್ದು ಪರಿಸ್ಥಿತಿ ತೀರ ಹದಗೆಟ್ಟಿದ್ದೆಡೆಗಳಲ್ಲಿ ನಿಯಂತ್ರಣ ಕಛೇರಿಯ ತುರ್ತುಗಮನ ಹರಿಯಲು ಸಹಾಯಕವಾಗಿರುವ ಈ ವ್ಯವಸ್ಥೆ ಸ್ವಾಗತಾರ್ಹ. ಶಾಖೆಗಳಲ್ಲಿಯೂ ಆದ್ಯತೆಯನ್ನು ಗುರುತಿಸಿಕೊಳ್ಳಲು ಈ ವ್ಯವಸ್ಥೆ ನೆರವಾದೀತೆಂದು ಭಾವಿಸಲಾಗಿದೆ. ಅಲ್ಲದೆ ಸಂಕೇತ 4ರಿಂದ 3, 3ರಿಂದ 2, 2ರಿಂದ 1—ಹೀಗೆ ಖಾತೆಗಳನ್ನು ಮೇಲೆತ್ತುವ ಕೆಲಸ ಆಗಬೇಕೆಂಬ ನಿರ್ದೇಶನವೂ ಇದ್ದು, ಈ ನಿಟ್ಟಿನಲ್ಲಿ ಶಾಖೆಗಳು ಕಾರ್ಯಪ್ರವೃತ್ತವಾಗಬಹುದಾಗಿದೆ. ಸಾಲಗಳ ಸ್ವಾಸ್ಥ್ಯಸ್ಥಿತಿ ಕುರಿತ ಅಂಕಿ ಅಂಶಗಳು ಎಲ್ಲ ಬ್ಯಾಂಕುಗಳಿಂದ ಒದಗಿಬರುವುದಾದಲ್ಲಿ ಮುಂಗಡಗಳ ಗುಣಮಟ್ಟದ ತೌಲನಿಕ ಅಧ್ಯಯನ ಸಾಧ್ಯವಾಗಬಹುದು. ಈ ವ್ಯವಸ್ಥೆ ಕುರಿತ ಸ್ಪಷ್ಟ ಕಲ್ಪನೆ ಮೂಡದಿರುವ ಆರಂಭಿಕ ದೆಸೆಯಲ್ಲಿ ಅಂಥ ಅಧ್ಯ

ಯಿಸಿದ ಕೈಗೊಳ್ಳಬಹುದಾದ ನಿರ್ಣಯಗಳು ಅರ್ಥಪೂರ್ಣವಾಗಲಾರದಿದ್ದರೂ ಕ್ರಮೇಣ ಪರಿಸ್ಥಿತಿ ಉತ್ತಮಗೊಳ್ಳುವುದು ಖಂಡಿತ. ಈ ವ್ಯವಸ್ಥೆಯಲ್ಲಿ ಸೂಚಿಸಲಾದಂತೆ ಮುಂಗಡಗಳ ವರ್ಗೀಕರಣವಾಗುವುದಾದರೆ ಬ್ಯಾಂಕುಗಳು ತಮ್ಮ ಉದರಿ ನೀತಿಗಳನ್ನು ರೂಪಿಸಿಕೊಳ್ಳಲು ಲಭ್ಯವಾಗುವ ಮಾಹಿತಿ ಮೌಲ್ಯಯುತವಾಗುತ್ತದೆ. ದೂರದ ಆಶೆಯಾದ ರಾಷ್ಟ್ರೀಯ ಉದರಿ ನೀತಿಯೊಂದರ ರೂಪಣಕ್ಕೆ ಇದು ಕಾಣಿಕೆ ನೀಡಲು ಸಾಧ್ಯ. ಬ್ಯಾಂಕುಗಳ ಆಸ್ತಿ ಹೊಣೆ ತಃಖ್ತೆಯಲ್ಲಿ ಮುಂಗಡಗಳ ವಿಭಾಗದ ಸ್ಪಷ್ಟಚಿತ್ರಣಕ್ಕೆ ಇದು ನೆರವಾಗುವುದರಲ್ಲಿ ಸಂಶಯವಿಲ್ಲ.

## ಪರಿನಿಯತ ಲೆಕ್ಕಪರಿಶೋಧನೆ ಮತ್ತು ಸ್ವಾಸ್ಥ್ಯಸೂಚಿ ವ್ಯವಸ್ಥೆ

ಪರಿನಿಯತ ಲೆಕ್ಕಪರಿಶೋಧಕರು ಬ್ಯಾಂಕಿನ ಆಸ್ತಿ ಹೊಣೆ ತಃಖ್ತೆಯ ಮೇಲೆ (ಇತರ ವಿಷಯಗಳೊಂದಿಗೆ) ಈ ಮುಂದಿನ ವಿಷಯಗಳನ್ನು ಕುರಿತು ಕೇಂದ್ರಕ್ಕೆ ವರದಿ ಮಾಡಬೇಕು.

1 ಬ್ಯಾಂಕಿನ ವ್ಯವಹಾರಗಳ ನೈಜ ಮತ್ತು ಸಮಂಜಸ ಚಿತ್ರವೊಂದನ್ನು ನೀಡುವಂತೆ ಅಗತ್ಯವಾದ ಎಲ್ಲ ವಿವರಗಳನ್ನು ಒಳಗೊಂಡು ಬ್ಯಾಂಕಿನ ಆಸ್ತಿ–ಹೊಣೆ ತಃಖ್ತೆ ತಮ್ಮ ಅಭಿಪ್ರಾಯದಲ್ಲಿ ಸಂಪೂರ್ಣ ಮತ್ತು ಸಮಂಜಸ ಆಸ್ತಿ–ಹೊಣೆ ತಃಖ್ತೆಯಾಗಿದೆಯೆ ?

2 ಲಾಭ–ನಷ್ಟ ಖಾತೆಯು ಆ ಖಾತೆಗೆ ಸಂಬಂಧಿಸಿದ ಅವಧಿಯ ನೈಜ ಶಿಲ್ಕನ್ನು ತೋರಿಸುತ್ತದೆಯೇ ? ಬ್ಯಾಂಕಿನ ಆಸ್ತಿಗಳಲ್ಲಿ ಅವು ನೀಡಿದ ಮುಂಗಡಗಳದ್ದೇ ಸಿಂಹಪಾಲು.

ಆದ್ದರಿಂದ ಬ್ಯಾಂಕ್ ಸಾಲಗಳನ್ನು ಕುರಿತ ವಿವಿಧ ವಲಯಗಳಲ್ಲಿನ ಸಹಜ ಸಂಶಯ ದಟ್ಟವಾಗುತ್ತಿರುವುದರ ಹಿನ್ನೆಲೆಯಲ್ಲಿ ಸಾಲಗಳನ್ನು ಕುರಿತ ಸ್ಪಷ್ಟಚಿತ್ರವನ್ನು ಆಸ್ತಿ–ಹೊಣೆ ತಃಖ್ತೆಯಲ್ಲಿ ನೀಡಲು ಮೊದಲಿದ್ದ ವ್ಯವಸ್ಥೆಗಿಂತಲೂ ಸಮರ್ಥವಾದ ವ್ಯವಸ್ಥೆಯೊಂದರ ಅಗತ್ಯವಿತ್ತು. ಸಾಲಗಳ ಸ್ವಾಸ್ಥ್ಯ ಸ್ಥಿತಿ ಸ್ಪಷ್ಟಪಡಿಸದೆ ಆಸ್ತಿಗಳೆಂದು ಅವನ್ನು ತೋರಿಸುವುದರಿಂದ ತಃಖ್ತೆ ಸಮಂಜಸವಾಗಲಾರದು.

ಸಾಲಗಳ ಮೇಲೆ ಗಳಿಸುವ ಬಡ್ಡಿ ಬ್ಯಾಂಕಿನ ಆದಾಯದ ಏಕೈಕ ಅಂಶವಲ್ಲದಿದ್ದರೂ ಬಹುಮುಖ್ಯ ಅಂಶ. ಆದುದರಿಂದ ಬ್ಯಾಂಕ್ ಸಾಲಗಳ ಸ್ಥಿತಿಯ ಸರಿಯಾದ ಕಲ್ಪನೆ ದೊರೆಯದಿದ್ದರೆ ಲಾಭ–ನಷ್ಟ ಖಾತೆಯ ಶಿಲ್ಕು ದಿಕ್ಕು ತಪ್ಪಿಸುವ ಅಂಕಿಯಾದೀತು. ಕೊಟ್ಟ ಅಸಲೇ ವಾಪಸಾಗುವುದು ದುಸ್ತರವಾಗಿರುವಾಗ ಬಡ್ಡಿಯನ್ನು ಆದಾಯದ ಲೆಕ್ಕಕ್ಕೆ ಸೇರಿಸುತ್ತ ಹೋಗುವುದರಲ್ಲಿ ಏನು ಅರ್ಥವಿದ್ದೀತು ? ಲಾಭ–ನಷ್ಟ ಖಾತೆಯ ಶಿಲ್ಕಿಗೂ ಸಾಲಗಳ ಸ್ವಾಸ್ಥ್ಯಕ್ಕೂ ಇನ್ನೊಂದು ರೀತಿಯ ಸಂಬಂಧವೂ ಇದೆ. ಕರಡು ಮತ್ತು ಸಂದಿಗ್ಧ ಸಾಲಗಳಿಗಾಗಿ ಬ್ಯಾಂಕುಗಳು ತೆಗೆದಿರಿಸಬೇಕಾದ ಮೀಸಲು ಲಾಭ–ನಷ್ಟ ಖಾತೆಯ ಶಿಲ್ಕಿನ ಮೇಲೆ ನೇರವಾದ ಪರಿಣಾಮ ಬೀರುತ್ತದೆ. ಕರಡು ಸಾಲಗಳಿಗೆ ಸರಿದೂಗುವ ಮೀಸಲಿನ ವ್ಯವಸ್ಥೆ ಮಾಡದಿದ್ದರೆ ಲಾಭದ ಅಂಕಿ ಗಮನಾರ್ಹವಾಗಿ ಏರಬಹುದು. ಈ ಎಲ್ಲ ದೃಷ್ಟಿಗಳಿಂದಲೂ ಸಾಲಗಳ ಸ್ವಾಸ್ಥ್ಯಸಂಕೇತ ವ್ಯವಸ್ಥೆ ಬಲಗೊಳ್ಳಬೇಕಾದ್ದು ಅಗತ್ಯವೆಂಬುದನ್ನು ಯಾರೂ ಮನಗಾಣಬಹುದು. ಪರಿನಿಯತ ಲೆಕ್ಕಪರಿಶೋಧಕರ ಕೆಲಸ ಸಮರ್ಪಕವಾಗಲು ಈ ವ್ಯವಸ್ಥೆ ನೆರವಾಗುತ್ತದೆ. ಕರಡು ಸಾಲಗಳಿಗೆಂದು ಮೀಸಲು ತೆಗೆದಿಡುವ ಪದ್ಧತಿ ಮೊದಲಿಂದಲೂ ಇದೆಯಾದರೂ, ತೆಗೆದಿರಿಸುವ ಮೀಸಲಿನ ಮೊತ್ತವನ್ನು ಅರ್ಥಪೂರ್ಣವಾಗಿಸಲು ಈ ವ್ಯವಸ್ಥೆ ನೆರವಾಗಬಲ್ಲುದು. ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬಹುದು. ಸಂದಿಗ್ಧತೆಗೆ ಎಡೆಯಿರುವ ಎಲ್ಲ ಸಾಲಗಳನ್ನೂ ಸಂಕೇತ 8ರಲ್ಲಿ ತೋರಿಸಿದರೂ, ಸಂಕೇತ 3ರಿಂದ 7ರ ಅಡಿ ಬರುವ ಇತರ ಸಾಲಗಳಲ್ಲಿ ಕೆಲವಂಶ ಕರಡಾಗುವ ಸಾಧ್ಯತೆಗಳನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಆದ್ದರಿಂದ ಈ ಸಂಕೇತಗಳ ಅಡಿ ತೋರಿಸಲಾಗುವ ಸಾಲಗಳ ಮೊತ್ತವನ್ನಾಧರಿಸಿ ಬ್ಯಾಂಕು ಯಥೋಚಿತವಾದ 'ಚರ ಮೀಸಲು' ಒಂದನ್ನು (Flaoting charge) ನಿರ್ಮಿಸುವುದೂ ಅಗತ್ಯವಾಗಬಹುದು.

## ಅರಿಯಬೇಕಾದ ಕಟುಸತ್ಯ

ಬ್ಯಾಂಕುಗಳಲ್ಲಿ ಈಗ ಇರುವಂಥ ಅರ್ಥಸಂಖ್ಯೆಯ ಸಾಲಗಳ ದೂರಗಾಮಿ ಪರಿಣಾಮಗಳನ್ನು ಎದುರಿಸುವುದು ಸುಲಭವಲ್ಲ. ಕ್ಷೇತ್ರಸಿಬ್ಬಂದಿಯ ಹೆಚ್ಚಳದ ಅಗತ್ಯವನ್ನೇನೋ ಮನಗಾಣಲಾಗಿದೆಯಾದರೂ ವೆಚ್ಚದ ದೃಷ್ಟಿಯನ್ನು ಬಿಡುವಂತಿಲ್ಲ. ಸಾಲಗಳ ಸಂಖ್ಯೆಯೇನೋ ದೊಡ್ಡದು ; ಆದರೆ ಸಣ್ಣ ಸಾಲಗಳ ಆಧಿಕ್ಯದ ಪರಿಣಾಮವಾಗಿ ಸಾಲಗಳ ಸರಾಸರಿ ಮೊತ್ತ ಕಡಿಮೆಯೇ ಆಗಿರುವುದರಿಂದ ಸಿಬ್ಬಂದಿ ಹೆಚ್ಚಿಸುವುದರಿಂದ ಒದಗುವ ಖರ್ಚಿಗಿಂತ ಕರಡು ಸಾಲಗಳ ಖರ್ಚೇ ಕಡಿಮೆಯಾಗುವುದೆಂಬ ಭಾವನೆ ಬ್ಯಾಂಕುಗಳದಾಗಿರಬಹುದು. ಈ 'ವ್ಯಾವಹಾರಿಕ ತರ್ಕ'ವನ್ನು ಬ್ಯಾಂಕುಗಳ ಬಹುತೇಕ ವರಿಷ್ಠರು (ಅನಧಿಕೃತವಾಗಿ) ಸಮರ್ಥಿಸುವುದುಂಟು. ಆದರೆ ಸಾಲಗಳನ್ನು ಉಸ್ತುವಾರಿಯಿಲ್ಲದೆ ಬಿಡುವುದರಿಂದ ಸಾರ್ವಜನಿಕರಲ್ಲಿ ಬೆಳೆಯಬಹುದಾದ ಅಪಾಯಕಾರಿ ಮನೋವೃತ್ತಿಯನ್ನು ಲೆಕ್ಕ ಹಾಕಿದರೆ ಚಿತ್ರ ಬೇರೆಯಾಗಬಹುದು.

ಈ ಹಿನ್ನೆಲೆಯಲ್ಲಿ ಸಾಲಗಳ ಸ್ವಾಸ್ಥ್ಯಮಾಪನ ವ್ಯವಸ್ಥೆಯೊಂದು ನೆಲೆಗೊಳ್ಳಬೇಕೆಂಬ ರಿಸರ್ವ್ ಬ್ಯಾಂಕಿನ ಆಶಯ ಅಭಿನಂದನೀಯ. ಆಶಯಗಳು ಒಳ್ಳೆಯವಾದರೂ ನಿರೀಕ್ಷಿತ ಫಲ ಸಿದ್ಧಿಸುವುದು ಆಚರಣೆಗೆ ತಂದಾಗ ಮಾತ್ರ. ತೊಡಕಿನ ವಿಷಯ ಇದೇ. ಈ ಹೊಸ ವ್ಯವಸ್ಥೆಯ ಜಾರಿಯಿಂದ ಅಧಿಕ ಕಾಗದದ ಕೆಲಸ, ಸಂಕೇತ ಸಂಖ್ಯೆ ನೀಡುವುದೇ ಹೊರೆ ಎನ್ನಿಸಿದರೆ ಉಸ್ತುವಾರಿಯ ಬಗೆ ಹೇಗೆ ? ಎಂಬ ಪ್ರಶ್ನೆ ಸಹಜ. ವಾಸ್ತವವಾಗಿ ತುರ್ತು ಗಮನ ಸಲ್ಲಬೇಕಾದದ್ದು ಉಸ್ತುವಾರಿಗೆ, ಅದಕ್ಕೆ ಸಮಯ ಲಭಿಸುವಂತೆ ಮಾಡುವ ಬದಲು ಮನೆವಾರ್ತೆಯನ್ನು ಇನ್ನಷ್ಟು ಹೆಚ್ಚಿಸಿದಂತಾಯಿತು. ಸಾಲಗಳ ಯಶಸ್ವಿ ಉಸ್ತುವಾರಿಗೆ ಈ ವ್ಯವಸ್ಥೆ ಒಂದು ಸಮರ್ಥ ಉಪಕರಣವಾಗಬಹುದೆಂಬುದರಲ್ಲಿ ಸಂಶಯವೇನೂ ಇರಲಾರದಾದರೂ ಮೂಲಭೂತ ಸಮಸ್ಯೆಯನ್ನು ಬಗೆಹರಿಸುವಲ್ಲಿ ಇದರಿಂದೇನೂ ಫಲವಿಲ್ಲವೆಂಬುದು ಅರಿಯಬೇಕಾದ ಕಟು ಸತ್ಯ.

ತಾನು ನೀಡಿದ ಸಾಲಗಳ ಮೇಲಣ ಹತೋಟಿಯನ್ನು ಬಹುಬೇಗ ಕಳೆದುಕೊಳ್ಳುತ್ತಿರುವ ಬ್ಯಾಂಕುಗಳು ತಮ್ಮ ಸಾಲಗಳ ಸ್ಥಿತಿಯನ್ನು ಚಿತ್ರಿಸಿದರೆ ಸಾಲದು. ಅದು ಬ್ಯಾಂಕಿನ ಆಸ್ತಿ ಹೊಣೆ ತಃಖ್ತೆಯ ಅಂಕಿಗಳನ್ನು ಅರ್ಥಪೂರ್ಣಗೊಳಿಸಬಹುದು. ಆದರೆ ಅಷ್ಟರಿಂದ ಸಾಲದ ವಸೂಲಾತಿಗೆ ಅನುಕೂಲವಾದಂತಾಯ್ತೇ ? ಉಸ್ತುವಾರಿಗೆ ಈಗಿರುವ ಸಾಧನಗಳನ್ನೇ ಸರಿಯಾಗಿ ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಸ್ವಾಸ್ಥ್ಯಸಂಕೇತ ವ್ಯವಸ್ಥೆ ಉದರಿ ಉಸ್ತುವಾರಿಯಲ್ಲಿ ಆದ್ಯತೆ ಗುರುತಿಸುವಲ್ಲಿ ನೆರವಾಗುತ್ತದೆ, ನಿಜ. ಸಂಕೇತ 3ರಿಂದ 2ಕ್ಕೆ, 4ರಿಂದ 3ಕ್ಕೆ; 2ರಿಂದ 1ಕ್ಕೆ—ಖಾತೆಗಳನ್ನು ತರಬೇಕೆಂಬುದಾಗಿ ಸುಲಭವಾಗಿ ಹೇಳಬಹುದಾದರೂ ಅದನ್ನು ಸಾಧ್ಯವಾಗಿಸುವ ಬಗೆ ಹೇಗೆಂಬ ಉಸ್ತುವಾರಿಯ ಮೂಲಭೂತ ಪ್ರಶ್ನೆ ಮೊದಲಿನಂತೆಯೇ ಉಳಿಯುತ್ತದೆ; ಅಷ್ಟೇ ಅಲ್ಲ, ಹೊಸ ವ್ಯವಸ್ಥೆ ಹೊರಿಸುವ ಮನೆವಾರ್ತೆಯಿಂದ ಇನ್ನೂ ಜಟಿಲಗೊಂಡರೆ ಆಶ್ಚರ್ಯವಲ್ಲ.

ಉರುಳುವ ಹಿಮಗಡ್ಡೆಯಂತೆ ಹಿಗ್ಗುತ್ತಿರುವುದರೊಂದಿಗೇ ಅಧೋಗತಿಯತ್ತ ವೇಗವರ್ಧಿಸಿಕೊಳ್ಳುತ್ತಿರುವ ಈ ಸಮಸ್ಯೆ ಕುರಿತು ಏನಾದರೂ ಮಾಡಲೇ ಬೇಕಾಗುತ್ತದೆ. ಇಲ್ಲಿ ಬ್ಯಾಂಕುಗಳ ಹತೋಟಿ ತಪ್ಪಿರುವುದು ಬಹುಮಟ್ಟಿಗೆ ಸಂಶಯಾತೀತವಾಗಿರುವುದರಿಂದ ಈ ನಿಟ್ಟಿನಲ್ಲಿ ರಿಸರ್ವ್ ಬ್ಯಾಂಕ್ ಕ್ರಮ ಕೈಗೊಳ್ಳುವುದು ತುರ್ತು ಅಗತ್ಯ.

## ಉಭಯಸಂಕಟ

ಇಲ್ಲಿ ಇನ್ನೊಂದು ವಿಷಯ ಅಪ್ರಸ್ತುತವಾಗದು. ರಿಸರ್ವ್ ಬ್ಯಾಂಕಿನ ಸ್ಪಷ್ಟಸೂಚನೆಗಳಂತೆ ಸಾಲಗಳನ್ನು ವರ್ಗೀಕರಿಸಿ ವರದಿ ಮಾಡುವುದು ಅನಿವಾರ್ಯವಾಗಿದ್ದು, ಕೇಂದ್ರ ಕಛೇರಿಗಳಿಗೆ ಅಪ್ರಿಯವೆನಿಸಬಹುದಾದ ಸಂಗತಿಗಳನ್ನು ಶಾಖೆಗಳು ತಲುಪಿಸಬೇಕಾಗಿದೆ. ಸಾಲವೊಂದನ್ನು ಮಂಜೂರು ಮಾಡಿರುವುದೇ ಅಲ್ಲದೆ ಅದರ ಉಸ್ತುವಾರಿ ಮತ್ತು ಸ್ವಾಸ್ಥ್ಯಕ್ಕೆ ಸಂಪೂರ್ಣ ಹೊಣೆಗಾರನಾದ ಅಧಿಕಾರಿಯೇ ಸ್ವಾಸ್ಥ್ಯಸಂಕೇತ ನೀಡಬೇಕಾಗಿರುವ

ದೊಂದು ಸಮಸ್ಯೆ. ಇಲ್ಲಿ ವಸ್ತುನಿಷ್ಠ ನಿರ್ಣಯ ಸಾಧ್ಯವಾದೀತೆಂದು ಭಾವಿಸುವುದು ಕಷ್ಟ. ಒಂದು ವೇಳೆ ಅದು ಸಾಧ್ಯವಾದರೂ, ಈ ಸಂಕೇತಗಳನ್ನು ದೃಢೀಕರಿಸಬೇಕಾದ ಪ್ರಾಧಿಕಾರಿಯ ವಿಷಯ? ಇದ್ದಕ್ಕಿದ್ದಂತೆ ವಾಸ್ತವತೆ ಕಠೋರವಾಗಿ ಎದುರಾದಾಗ ಅಹಿತಕರ ಪ್ರತಿಕ್ರಿಯೆ ತೋರಿಬಂದರೆ ಆಶ್ಚರ್ಯವಲ್ಲ. ಹೀಗಾದಾಗ ಶಾಖೆಗಳಲ್ಲಿ ಗೊಂದಲ ಹೆಚ್ಚುವುದೆಂದು ನಿರೀಕ್ಷಿಸಬಹುದು. ಪರಿನಿಯತ ಲೆಕ್ಕಪರಿಶೋಧನೆಗೆ ಮೊದಲು ಶಾಖಾ ವ್ಯವಸ್ಥಾಪಕರಿಗೆ ವಿಚಾರಸಂಕಿರಣದ ಹೆಸರಿನಲ್ಲಿ (ಕೆಲವು ಬ್ಯಾಂಕುಗಳು) ನೀಡುವ 'ಕಿವಿಮಾತು' ಗುಟ್ಟಾಗೇನೂ ಉಳಿದಿಲ್ಲ, ಸಾಧ್ಯವಾದಷ್ಟು ಉತ್ತಮ ಚಿತ್ರ ನೀಡಬೇಕೆಂಬುದೇ ಅದರ ತಿರುಳೆಂದು ಶಾಖೆಗಳಿಗೆ ಆಗಮಿಸುವ ಲೆಕ್ಕಪರಿಶೋಧಕರಿಗೆ ತಿಳಿದಂತಿದೆ. ಹೀಗಾಗಿ, ಜಮಖಾನೆಯಡಿ ಕಸ ತಳ್ಳುವ ಪ್ರವೃತ್ತಿಯ ಬ್ಯಾಂಕುಗಳಿಗೆ ಸ್ವಾಸ್ಥ್ಯಸಂಕೇತ ನೀಡಿಕೆಯ ಕಾರ್ಯ ಉಭಯಸಂಕಟಕಾರಿಯಾಗಲು ಸಾಧ್ಯ.

ಈ ಹಿನ್ನೆಲೆಯಲ್ಲಿ ಸಂಕೇತ ನೀಡಿಕೆ ವಸ್ತುನಿಷ್ಠವಾಗುವಂತೆ ಕ್ರಮ ಕೈಗೊಳ್ಳುವುದು ಅಗತ್ಯವೆನಿಸಬಹುದು. ಸಾಲ ಖಾತೆಗಳ ಸ್ಥಿತಿ ಕುರಿತು ಕ್ಷೇತ್ರ ಸಿಬ್ಬಂದಿಗೆ ಇರುವಷ್ಟು ಮಟ್ಟಿನ ಅರಿವು ಇತರರಿಗೆ ಉಂಟಾಗುವುದಕ್ಕೆ ಹೆಚ್ಚಿನ ಸಮಯ ಬೇಕಾಗುವುದರಿಂದ ಸಂಕೇತನೀಡಿಕೆಯ ಕೆಲಸವನ್ನು ಮೂರನೆಯವರಿಗೆ ಒಪ್ಪಿಸುವುದು ಸದ್ಯಕ್ಕಂತೂ ಸಾಧ್ಯವಾಗದು. ಇದೇನೇ ಆದರೂ, ಈ ವ್ಯವಸ್ಥೆ ಸಾಲಗಳ ಸ್ವಾಸ್ಥ್ಯಸ್ಥಿತಿಯನ್ನು ಮೊದಲಿಗಿಂತಲೂ ಹೆಚ್ಚು ಸಮರ್ಪಕವಾಗಿ ಬಿಂಬಿಸಲು ನೆರವಾಗುವುದೆಂಬುದರಲ್ಲಿ ಸಂಶಯವಿರಬಾರದು.

## ಚಿಕಿತ್ಸೆ ಏನು ?

ವ್ಯಾಧಿ ರಟ್ಟಾದಂತೆ ಆಯಿತು ಎಂದುಕೊಳ್ಳೋಣ. ಇನ್ನು ಇದಕ್ಕೆ ಚಿಕಿತ್ಸೆಯನ್ನು ಸೂಚಿಸಬೇಕಲ್ಲ? ಹೆಚ್ಚುತ್ತಿರುವ ಕೈಗಾರಿಕಾ ಅಸ್ವಸ್ಥತೆ, ಸಾಲಗಳ ಸಂಖ್ಯೆ ಮಿತಿಮೀರಿರುವುದು, ಸಾಲ ಮರುಪಾವತಿ ವಿಷಯದಲ್ಲಿ ಕೆಲ ವರ್ಗಗಳ ಸಾರ್ವಜನಿಕರಲ್ಲಿ ಮೂಡಿರುವ ತಪ್ಪು ಅಭಿಪ್ರಾಯ, ಕ್ಷೇತ್ರ ಸಿಬ್ಬಂದಿಯ ಕೊರತೆ, ವಿವಿಧ ಯೋಜನೆಗಳಡಿ ನೀಡಬೇಕಾಗಿರುವ ಹೊಸ ಹೊಸ ಸಾಲಗಳು—ಈ ಒಂದೊಂದೂ ಚಿಕಿತ್ಸಕರಿಗೆ ಸವಾಲು. ಉಸ್ತುವಾರಿ ಅಸಮರ್ಪಕವೆನಿಸಿರುವ ಈ ಸಂದರ್ಭದಲ್ಲಿ ಶಾಖೆಗಳ ಮೇಲೆ ಅದಕ್ಷತೆಯನ್ನು ಆರೋಪಿಸುವುದು ಸುಲಭ. ಆದರೆ ಸಮಸ್ಯೆಯ ಮೂಲ ಬೇರೆಯೇ ಇರಬಹುದು.

ಸ್ವಾಸ್ಥ್ಯಸಂಕೇತ ವ್ಯವಸ್ಥೆ ಇನ್ನೂ ಜಾರಿಗೊಳ್ಳುವ ಹಂತದಲ್ಲಿಯೇ ಇರುವುದರಿಂದ ಅದನ್ನು ಉತ್ತಮಪಡಿಸಲು ಸಲಹೆ ನೀಡಲು ಇದು ಸಕಾಲವಲ್ಲವೇನೋ. ಆದರೆ ಉಸ್ತುವಾರಿಗೆ ಸಂಬಂಧಿಸಿದ ಈ ಮುಂದಿನ ಸಲಹೆಗಳನ್ನು ರಿಸರ್ವ್ ಬ್ಯಾಂಕ್/ಸರಕಾರ ಅವಶ್ಯವಾಗಿ ಪರಿಶೀಲಿಸಬೇಕಾಗಬಹುದು :

1 ಮುಂಗಡಗಳತ್ತ ಶಾಖೆಗಳು ತುರ್ತುಗಮನ ನೀಡಲಾಗುವಂಥ ವಾತಾವರಣದ ನಿರ್ಮಾಣ. ಉದಾ: ಕ್ಷೇತ್ರ ಸಿಬ್ಬಂದಿಯ ಹೆಚ್ಚಳ. ನೀಡಬೇಕಾದ ಸಾಲಗಳ ಸಂಖ್ಯೆ ಇಳಿಸುವುದು, ಇತ್ಯಾದಿ.

2 ಕೇಂದ್ರ ಕಛೇರಿಗಳಲ್ಲಿಯ ಕೈಗಾರಿಕಾ ಪುನರುಜ್ಜೀವನ ಕೋಶಗಳನ್ನು (Industrial Rehabilitation Cells) ಬಲಗೊಳಿಸುವ ಮೂಲಕ ಕೈಗಾರಿಕಾ ಅಸ್ವಸ್ಥತೆಯ ದುಷ್ಪರಿಣಾಮಗಳನ್ನು ಮಿತಿಗೊಳಿಸುವುದು.

3 ಕಾಲಪರಿಮಿತಿ ಅಧಿನಿಯಮದಿಂದ ಕೆಲವು ಬಗೆಯ ಬ್ಯಾಂಕ್ ಸಾಲಗಳಿಗಾದರೂ ವಿನಾಯಿತಿ.

4 ಬ್ಯಾಂಕ್ ಸಾಲಗಳಿಗೆ ಸಂಬಂಧಿಸಿದ ದಾವೆಗಳ ಇತ್ಯರ್ಥಕ್ಕೆ ಪ್ರತ್ಯೇಕ ನ್ಯಾಯಾಲಯಗಳ ಸ್ಥಾಪನೆ (ಇದು ಬ್ಯಾಂಕುಗಳ ಬಹು ದಿನದ ಬೇಡಿಕೆ).

5 ಬ್ಯಾಂಕ್ ಸಾಲದ ದುರುಪಯೋಗ ದಂಡಾರ್ಹ ಅಪರಾಧವೆಂದು ಪರಿಗಣಿಸುವ ದಿಸೆಯಲ್ಲಿ ಕಾನೂನಿಗೆ ತಿದ್ದುಪಡಿ.

ಈ ಚಿಕಿತ್ಸೆಗಳು ತೀರ ಕಠಿಣವೆನಿಸಿದರೂ ವ್ಯಾಧಿಯ ಉಲ್ಬಣಾವಸ್ಥೆಯಲ್ಲಿ ಚಿಕಿತ್ಸೆ ಕಠೋರವೆಂದರೂ ಸುಮ್ಮನಿರುವುದೇ ವಿವೇಕವೆಂದು ಯಾರೂ ಹೇಳಲಾರರು. ಈ ಕುರಿತ ಹೆಚ್ಚಿನ ಚರ್ಚೆ ಲೇಖನದ ವ್ಯಾಪ್ತಿಗೆ ಮೀರಿದ್ದು. ಸಾಲಗಳ ಸ್ವಾಸ್ಥ್ಯಸಂಕೇತ ವ್ಯವಸ್ಥೆಯನ್ನು ಸ್ವಾಗತಿಸುವಲ್ಲಿ ಮುಂದಿನ ಕ್ರಮಗಳಿಗೆ ಇದು ನಾಂದಿಯಾದೀತೆಂಬ ಭಾವನೆ ಸುಳಿಯುವುದು ಸಹಜ. ಈ ದೃಷ್ಟಿಯಿಂದ ಮೇಲಿನ ಸ್ಥೂಲವಾದ ಚರ್ಚೆ.

## ಪರಿಸಮಾಪ್ತಿ

ಈ ಎಲ್ಲ ವಿಷಯಗಳ ಕೂಲಂಕಷ ಪರಿಶೀಲನೆ ನಡೆಸಿದರೆ ಕೆಲವು ಸಂಗತಿಗಳಂತೂ ಸ್ಪಷ್ಟ: ಸಾಲಗಳ ಸ್ವಸ್ಥತೆಯ ವಿಷಯದಲ್ಲಿ ರಿಸರ್ವ್ ಬ್ಯಾಂಕಿನ ಕಾಳಜಿ ಹೆಚ್ಚಿದೆ. ಅಂತಲೇ ಉದರಿ ಉಸ್ತುವಾರಿ ವ್ಯವಸ್ಥೆಯನ್ನು ಬಲಗೊಳಿಸಲು ಅದು ಕಾರ್ಯಪ್ರವೃತ್ತವಾಗಿದೆ. ಸಾಲಗಳ ಸ್ವಾಸ್ಥ್ಯಸಂಕೇತ ವ್ಯವಸ್ಥೆ ಈ ನಿಟ್ಟಿನಲ್ಲೊಂದು ಹೆಜ್ಜೆ. ಆದರೆ ಇಷ್ಟೇ ಸಾಲದು. ಸಾಲಗಳ ವಸೂಲಾತಿ ಬಗೆಗೆ ಇದೇ ಕಳಕಳಿ ಬೇಕು. ಅಲ್ಲಿ ಒದಗಬಹುದಾದ ನಾನಾ ತೊಡಕುಗಳನ್ನು ನಿವಾರಿಸಲು ಮುಂದಾಗಬೇಕು. ಪರಿಣಾಮಕಾರಿಯಾದ ವಸೂಲಾತಿ ವ್ಯವಸ್ಥೆಯೊಂದನ್ನು ಜಾರಿಗೊಳಿಸುವ ನಿಟ್ಟಿನಲ್ಲಿ ಆಲೋಚನೆ ಹರಿದಾಗಲೇ ಬ್ಯಾಂಕುಗಳ ಜೀವಂತಿಕೆಗೆ ಸಂಬಂಧಿಸಿದ ಆತಂಕ ನಿವಾರಣೆಯಾದೀತು. ಸ್ವಾಸ್ಥ್ಯಸಂಕೇತ ವ್ಯವಸ್ಥೆ ಉದರಿ ಉಸ್ತುವಾರಿಯ ಒಂದು ಉಪಕರಣವಷ್ಟೆ. ಈಗಾಗಲೇ ಇರುವ ಉಪಕರಣಗಳೊಡನೆ ಇನ್ನೊಂದು ಸೇರಿದರೂ, ಮೂಲಭೂತ ಸಮಸ್ಯೆಗಳು ಬೇರೆಯಾಗಿರುವುದರಿಂದ ಹೆಚ್ಚಿನ ಫಲ ನಿರೀಕ್ಷಿಸುವಂತಿಲ್ಲ. ಅಸ್ವಸ್ಥತೆಯ ಅರಿವು ಮೂಡಿಸುವುದರಿಂದ ಈ ವ್ಯವಸ್ಥೆ ಹೆಚ್ಚೆಂದರೆ ಒಂದು ಎಚ್ಚರಿಕೆಯ ಗಂಟೆಯಾದೀತು. ಅಪಾಯದ ಗಂಟೆಯನ್ನು ಮೊಳಗಿಸುವುದೇನೋ ಸರಿ, ಅದರಿಂದ ತಪ್ಪಿಸಿಕೊಳ್ಳಲು ದಿಕ್ಕುಗಾಣದೆ ಚಡಪಡಿಸುವವರ ನೆರವಿಗೆ ಏನಾದರೂ ಮಾಡಬೇಕಷ್ಟೆ ? □

---

ಬ್ಯಾಂಕೊಂದರ ಕಾರ್ಯಪಾಲನೆಯ ಪರೀಕ್ಷೆಗಾಗಿ ಈ ಮುಂದಿನ ನಿರ್ಣಾಯಕ ಮಾನದಂಡಗಳನ್ನು ಅನ್ವಯಿಸಬಹುದು : ಬ್ಯಾಂಕಿನ ಠೇವಣಿಗಳ ಬೆಳವಣಿಗೆ ಸಮರ್ಪಕವಾಗಿರಬೇಕು. ವಿಧಿಸಲಾದ ಮೀಸಲು ಅಗತ್ಯಗಳನ್ನು ಅದು ಪೂರೈಸಬೇಕು. ಮತ್ತು ಆದ್ಯತಾ ವಲಯಗಳಿಗೆ ಸಾಲ ನೀಡಿಕೆಯ ಬಗ್ಗೆ ಇರುವ ಸೂತ್ರಗಳನ್ನು ಅನುಸರಿಸಬೇಕು. ಈ ಎಲ್ಲ ಅಪೇಕ್ಷಿತಗಳನ್ನು ಪೂರೈಸಿದ ಮೇಲೆ, ಕರಡು ಹಾಗೂ ಅನುಮಾನ ಸಾಲಗಳಿಗೆ ಅಗತ್ಯವಾದ ಏರ್ಪಾಟುಗಳನ್ನು ಮಾಡಿದ ಅನಂತರ, ಬ್ಯಾಂಕು ತಕ್ಕಮಟ್ಟಿಗೆ ಲಾಭಪ್ರದತೆಯನ್ನು ತೋರಿಸಿದ ಪಕ್ಷದಲ್ಲಿ ಆ ಬ್ಯಾಂಕಿನ ಕಾರ್ಯಪಾಲನೆ ಪ್ರಶಂಸಾರ್ಹವೆಂದು ನಾನು ಪರಿಗಣಿಸುತ್ತೇನೆ. ಎಲ್ಲ ಗ್ರಾಹಕರಿಗೆ, ಠೇವಣಿದಾರರು ಮತ್ತು ಸಾಲಗಾರರು ಈ ಎರಡೂ ವರ್ಗಗಳ ಗ್ರಾಹಕರಿಗೆ, ಅದು ನೀಡುವ ಸೇವೆಯ ಬಗ್ಗೆ ಒಳ್ಳೆಯ ಕೀರ್ತಿ ಸಂಪಾದಿಸಿದ್ದರೆ ಆ ಬ್ಯಾಂಕಿನ ಬಗ್ಗೆ ನನ್ನ ಮೆಚ್ಚುಗೆ ಇನ್ನಷ್ಟು ಅಧಿಕವಾಗುತ್ತದೆ.

ವಿವಿಧ ಬ್ಯಾಂಕುಗಳ ಬಗ್ಗೆ ನಿಯತಕಾಲಿಕವಾಗಿ ನಡೆಸಲಾಗುತ್ತಿರುವ ಮೌಲ್ಯ ನಿರ್ಧಾರಣಗಳಿಂದ ಅವುಗಳ ಕಾರ್ಯಪಾಲನೆ ಕೆಲವು ನಿಟ್ಟುಗಳಲ್ಲಿ ತಕ್ಕಮಟ್ಟಿಗೆ ಸುಧಾರಿಸಿದೆಯೆಂದು ಹೇಳಲು ನನಗೆ ಸಂತೋಷವಾಗುತ್ತದೆ. ಇತರ ಕೆಲವು ಕ್ಷೇತ್ರಗಳಲ್ಲಿ ಅವುಗಳ ಕಾರ್ಯಪಾಲನೆ ಖಂಡಿತ ಇನ್ನಷ್ಟು ಚೆನ್ನಾಗಿದ್ದಿರಬಹುದಿತ್ತು ಎಂಬುದೂ ನಿಜ. ಬ್ಯಾಂಕುಗಳ ಆಂತರಿಕ ಸಂರಚನೆಗಳು ಸುದೃಢವಾಗಿವೆ. ತಮ್ಮ ಸಿಬ್ಬಂದಿಯ ತರಬೇತಿಗೆ ಅವು ಸಾಕಷ್ಟು ಸಾಮರ್ಥ್ಯ ರೂಢಿಸಿಕೊಂಡಿವೆ. ಮನೆವಾರ್ತೆ ಗಮನಾರ್ಹವಾಗಿ ಸುಧಾರಿಸಿದೆ. ಗ್ರಾಹಕಸೇವೆ ಕೂಡ ಸುಧಾರಣೆಯ ಚಿಹ್ನೆಗಳನ್ನು ತೋರಿಸುತ್ತಿದೆ. ಲಾಭಪ್ರದತೆ ಚೇತರಿಸಿಕೊಂಡಿದೆ. ಆದರೆ ಉತ್ತಮ ಉದರಿ ನಿರ್ವಹಣೆಯ ಮೂಲಕ, ಕೈಗಾರಿಕೆಯಲ್ಲಿ ತಲೆದೋರುತ್ತಿರುವ ಇಲ್ಲವೇ ಸಾಕಷ್ಟು ಮುಂದುವರಿದಿರುವ ಅಸ್ವಸ್ಥತೆಯ ಚಿಹ್ನೆಗಳಿಗೆ ತ್ವರಿತವಾಗಿ ಸ್ಪಂದಿಸುವುದರ ಮೂಲಕ, ಸಾಲಗಳ ಆರೋಗ್ಯದ ಕಡೆಗೆ ಹೆಚ್ಚಿನ ಗಮನ ಹರಿಸುವುದು ಅಗತ್ಯ. ಆದ್ಯತಾ ವಲಯದ ಸಾಲದ ನಿರ್ವಹಣೆಯಲ್ಲಿ ಸುಧಾರಣೆಯನ್ನು ಸಾಧಿಸಲು ಬಹಳಷ್ಟು ಅವಕಾಶ ಇದೆ. ಇದುವರೆಗೆ ಸಾಧಿಸಿರುವ ಪ್ರಗತಿ ತೃಪ್ತಿಕರವಾಗಿದೆಯೆನಿಸಿದರೂ, ಈ ನಿಟ್ಟಿನಲ್ಲಿ ಇನ್ನೂ ಸಾಧಿಸಬೇಕಾದ್ದು ಬಹಳ ಇದೆ.

ಆರ್. ಎನ್. ಮಲ್ಹೋತ್ರ
ಗವರ್ನರ್, ಭಾರತೀಯ ರಿಸರ್ವ್ ಬ್ಯಾಂಕ್

---

# ಅಪಘಾತಗಳಿಂದ ನಿಮ್ಮ ಮಗುವನ್ನು ರಕ್ಷಿಸಿ

ನಿಮ್ಮ ಮಗು ಒಲೆ, ಸ್ಟೌವ್, ಬೆಂಕಿ
ಇತ್ಯಾದಿ ಬಳಿ ಆಡಲು ಬಿಡಬೇಡಿ.

ಸೀಮೆಎಣ್ಣೆ, ವಿದ್ಯುತ್ ಉಪಕರಣಗಳು
ಹಾಗೂ ಹರಿತವಾದ ವಸ್ತುಗಳನ್ನು
ನಿಮ್ಮ ಮಗುವಿಗೆ ಸಿಗದಂತೆ ಇಡಿ.

ಮಗುವಿನ ಆಟದ ಸಾಮಾನುಗಳ
ತುದಿ ಮೊನಚಾಗಿರಬಾರದು.

ನಿಮ್ಮ ಮಗುವಿನ ಉಡುಪಿನಲ್ಲಿ ಸೂಜಿ,
ಪಿನ್ನು ಇತ್ಯಾದಿಗಳನ್ನು ಬಳಸಬೇಡಿ.

ಹೆಚ್ಚಿನ ವಿವರಗಳಿಗೆ :
**ನಿರ್ದೇಶಕರು**
**ಸಮಾಜ ಕಲ್ಯಾಣ ಇಲಾಖೆ**
**ಕರ್ನಾಟಕ ಸರ್ಕಾರ**
**ಬೆಂಗಳೂರು**—ಇವರನ್ನು ಸಂಪರ್ಕಿಸಿ

ಅನುಬಂಧ (ಹಿಂದಿನ ಲೇಖನಕ್ಕೆ)
ವಿಭಾಗ :

# ಭಾರತೀಯ ಸ್ಟೇಟ್ ಬ್ಯಾಂಕ್

ಪುತ್ತೂರು ಶಾಖೆ

ಸ್ವಾಸ್ಥ್ಯ ಸಂಕೇತ ಸಂಖ್ಯೆ 1

ನಮೂನೆ : 1

1987ರ ಡಿಸೆಂಬರ್ 31ರಲ್ಲಿದ್ದಂತೆ ತೃಪ್ತಿಕರ ಖಾತೆಗಳ ವಾರ್ಷಿಕ ಪರತ
(ಕೇವಲ ತೃಪ್ತಿಕರ ಖಾತೆ (ಸಕ್ರಮ ಖಾತೆ)ಗಳಿಗೆ ಮಾತ್ರ ಅನ್ವಯಿಸತಕ್ಕದ್ದು)

| ಕ್ರಮ ಸಂಖ್ಯೆ | ಸಾಲಗಾರನ ಮತ್ತು ಖಾತರಿದಾರನ/ರ ಹೆಸರು | ಸಂರಚನೆ (Constitution) | ಸೌಲಭ್ಯದ ಬಗೆ | ಹಿಂದೆ ಮಂಜೂರಾದ/ನವೀಕರಿಸಿದ ದಿನಾಂಕ | ಮಿತಿ ರೂ. ಪೈ. | ಡ್ರಾಯಿಂಗ್ ಪರಿಮಿತಿ ರೂ. ಪೈ. |
|---|---|---|---|---|---|---|
| | | | | | | |

| 1987 ಡಿಸೆಂಬರ್ 31ರಲ್ಲಿದ್ದಂತೆ ಬಾಕಿ | | | | | ಬಾಕಿಯನ್ನು Cos. 347ರ ಬಾಬ್ತುಗಳಾಗಿ ವರ್ಗೀಕರಿಸಿದ್ದು | | |
|---|---|---|---|---|---|---|---|
| ನಗದು ಉದರಿ ರೂ.ಪೈ. | ಮೀರೆಳೆತ ರೂ.ಪೈ. | ತಗಾದೆ ಸಾಲ ರೂ. ಪೈ. | ಅವಧಿ ಸಾಲ ರೂ. ಪೈ | ವಟಾಯಿಸಿದ ಮತ್ತು ಖರೀದಿಸಿದ ಹುಂಡಿಗಳು ರೂ. ಪೈ. | (i) ಪ್ರಾಥಮಿಕ ಅಥವಾ ಆನುಷಂಗಿಕ ಭದ್ರತೆಯ ಮಾರುಕಟ್ಟೆ ಮೌಲ್ಯ ಆಧರಿಸಿದ್ದು ರೂ. ಪೈ. | (ii) ಸಾಲಗಾರನು ಮಾತ್ರ ಹೊಣೆಯಾಗಿರುವ ನಿರಾಧಾರಸಾಲ ರೂ. ಪೈ. | (iii) ಖಾತರಿದಾರನು ಹೊಣೆಯಾಗಿರುವ ನಿರಾಧಾರ ಸಾಲ ರೂ. ಪೈ. |
| | | | | | | | |

| ಪ್ರಾಥಮಿಕ ಭದ್ರತೆಯ ವಿವರಗಳು | | | ಆನುಷಂಗಿಕ ಭದ್ರತೆ | |
|---|---|---|---|---|
| ಭದ್ರತೆಯ ಸ್ವರೂಪ | 31–12–87ರಲ್ಲಿದ್ದಂತೆ ಮಾರುಕಟ್ಟೆ ಮೌಲ್ಯ | ಹಿಂದಿನ ಸರಕು ತಃಖ್ತೆಯ ದಿನಾಂಕ (ಸರಕು ತಃಖ್ತೆ ಲಗತ್ತಿಸದಿದ್ದರೆ) | ಭದ್ರತೆಯ ಸ್ವರೂಪ | ದಿನಾಂಕ 31–12–87ರಲ್ಲಿದ್ದಂತೆ ಮಾರುಕಟ್ಟೆ ಮೌಲ್ಯ |
| | | | | |

| ಖಾತರಿದಾರನ ಯೋಗ್ಯತೆ | | DICGC/ECGC ಸಂಸ್ಥೆಯ ಖಾತರಿ ಕುರಿತ ಸ್ಥಿತಿ | ಭದ್ರತೆಯನ್ನು ಪೂರ್ಣಗೊಳಿಸಲು ಅಗತ್ಯವಾದ ಪ್ರಾಥಮಿಕ ದಸ್ತಾವೇಜು (ಇದ್ದಲ್ಲಿ) | ಸಾಮಾನ್ಯ ಷರಾ |
|---|---|---|---|---|
| ಮಾಹಿತಿ ದಿನಾಂಕ | ಮೊಬಲಗು ರೂ. ಪೈ. | | | |
| | | | | |

# ಫೋರ್ಜರಿ ಚೆಕ್ಕು ಮತ್ತು ಬ್ಯಾಂಕರನ ಹೊಣೆ

## ಕೆನರಾ ಬ್ಯಾಂಕ್ ವಿರುದ್ಧ ಕೆನರಾ ಸೇಲ್ಸ್ ಕಾರ್ಪೊರೇಷನ್ (ಎ.ಆರ್. ಆರ್. 1987 ಎಸ್. ಸಿ. 1603) ತೀರ್ಪಿನ ಹಿನ್ನೆಲೆಯಲ್ಲಿ

ರಾಜಾರಾಮ ಹೆಗಡೆ
ಸಹಾಯಕ ಕಾನೂನು ಅಧಿಕಾರಿ
ಸ್ಥಳೀಯ ಪ್ರಧಾನ ಕಛೇರಿ,
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು

ಬ್ಯಾಂಕುಗಳ ಮೇಲೆ ಅತ್ಯಂತ ಮಹತ್ವದ ಪರಿಣಾಮ ಬೀರಬಹುದಾದ ತೀರ್ಪೊಂದನ್ನು ಸರ್ವೋಚ್ಚ ನ್ಯಾಯಾಲಯ ಕೆನರಾ ಬ್ಯಾಂಕ್ ವಿರುದ್ಧ ಕೆನರಾ ಸೇಲ್ಸ್ ಕಾರ್ಪೊರೇಶನ್ (ಎ.ಆರ್.ಆರ್. 1987 ಎಸ್. ಸಿ. 1603) ವ್ಯಾಜ್ಯದಲ್ಲಿ ಇತ್ತೀಚೆಗೆ ನೀಡಿತು. ಇಂತಹ ವ್ಯಾಜ್ಯಗಳಲ್ಲಿ ಸರ್ವೇಸಾಮಾನ್ಯವಾಗಿ ತೆಗೆದುಕೊಳ್ಳುತ್ತಿದ್ದ, ಗ್ರಾಹಕನ ನಿರ್ಲಕ್ಷ್ಯ/ಸಹಾಯಕಾರಿ ನಿರ್ಲಕ್ಷ್ಯ, ವಾದವನ್ನು ಸರ್ವೋಚ್ಚ ನ್ಯಾಯಾಲಯ ತಿರಸ್ಕರಿಸಿತು. ಈ ರೀತಿ ಗ್ರಾಹಕನ ನಿರ್ಲಕ್ಷ್ಯ/ಸಹಾಯಕಾರಿ ನಿರ್ಲಕ್ಷ್ಯದ ವಾದವನ್ನು ಮುಂದೊಡ್ಡಿ, ಬ್ಯಾಂಕುಗಳು ತಮ್ಮ ಹೊಣೆಯಿಂದ ತಪ್ಪಿಸಿಕೊಳ್ಳಲಾಗದು ಎನ್ನುವ ಅಭಿಪ್ರಾಯವನ್ನು ಅದು ವ್ಯಕ್ತಪಡಿಸಿತು.

ಪ್ರಸ್ತುತ ನಿರ್ಣಯದಲ್ಲಿ ಇಂಗ್ಲೆಂಡ್, ಭಾರತಗಳಲ್ಲಿ ಈ ಕುರಿತು ಇರುವ ಸ್ಥಿತಿ, ಫೋರ್ಜರಿ ಚೆಕ್ಕುಗಳ ಸಂದರ್ಭಗಳಲ್ಲಿ ಬ್ಯಾಂಕುಗಳ ಹೊಣೆ, ಗ್ರಾಹಕನ ನಿರ್ಲಕ್ಷ್ಯವನ್ನು ಆಧರಿಸಿ ತೆಗೆದುಕೊಳ್ಳುವ ವಿಬಂಧದ ವಾದ, ತನ್ನ ಪಾಸ್ ಪುಸ್ತಕಗಳ ವಿವಿಧ ನಮೂದುಗಳನ್ನು ಕಳುಹಿಸುವ ತಃಖ್ತೆ ಇತ್ಯಾದಿ ಸಂದರ್ಭಗಳಲ್ಲಿ ಗ್ರಾಹಕ ವಹಿಸಬೇಕಾದ ಹೊಣೆ ಎಚ್ಚರಿಕೆಗಳ ಬಗ್ಗೆ ಈ ತೀರ್ಪಿನಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಈ ತೀರ್ಪನ್ನು ವಿಶ್ಲೇಷಿಸುವ ಮುನ್ನ ಪ್ರಸ್ತುತ ವ್ಯಾಜ್ಯದ ವಾಸ್ತವಾಂಶಗಳ ಬಗ್ಗೆ ಸಂಕ್ಷಿಪ್ತವಾಗಿ ನೋಡೋಣ.

ಕೆನರಾ ಸೇಲ್ಸ್ ಕಾರ್ಪೊರೇಶನ್ ಎಂಬ ಕಂಪನಿ ಕೆನರಾ ಬ್ಯಾಂಕಿನ ಮಂಗಳೂರು ಶಾಖೆಯಲ್ಲಿ ಚಾಲ್ತಿ ಖಾತೆಯೊಂದನ್ನು ಹೊಂದಿತ್ತು. ಈ ಖಾತೆಯ ನಿರ್ವಹಣೆಯ ಹೊಣೆಯನ್ನು ಕಂಪನಿಯ ಕಾರ್ಯನಿರ್ವಾಹಕ ನಿರ್ದೇಶಕರಿಗೆ ಒಪ್ಪಿಸಲಾಗಿತ್ತು. ಕಂಪನಿಯ ಚೆಕ್ ಪುಸ್ತಕಗಳೆಲ್ಲವೂ ಸಂಸ್ಥೆಯ ಮುಖ್ಯ ಲೆಕ್ಕಾಧಿಕಾರಿಯಾಗಿದ್ದ ಶ್ರೀ ವೈ. ವಿ. ಭಟ್ ಎಂಬವರ ಸ್ವಾಧೀನದಲ್ಲಿದ್ದುವು.

1961ರಲ್ಲಿ, ಈ ಮುಖ್ಯ ಲೆಕ್ಕಾಧಿಕಾರಿ ಗೈರು ಹಾಜರಾಗಿದ್ದ ಸಮಯದಲ್ಲಿ, ಈತನ ಸಹಾಯಕನಿಗೆ ಲೆಕ್ಕದ ಮೇಲ್ವಿಚಾರಣೆಯ ಹೊಣೆಯನ್ನು ನೀಡಿ, ಎಲ್ಲ ಲೆಕ್ಕಪತ್ರಗಳನ್ನು ತಾಳೆ ನೋಡಿ ನಿಖರವಾಗಿಸಲು ಆದೇಶಿಸಿತು. ಆಗ ವಿವರವಾಗಿ ಪರಿಶೀಲನೆ ಮಾಡುತ್ತಿದ್ದಾಗ ಅನೇಕ ಅವ್ಯವಹಾರಗಳು ಬೆಳಕಿಗೆ ಬಂದುವು. ಹೆಚ್ಚಿನ ತನಿಖೆ ಮಾಡಲಾಗಿ, ಕಾರ್ಯನಿರ್ವಾಹಕ ನಿರ್ದೇಶಕರು ಸಹಿ ಮಾಡಿದ್ದರೆನ್ನಲಾದ ಅನೇಕ ಚೆಕ್ಕುಗಳನ್ನು (ವಾಸ್ತವವಾಗಿ ಫೋರ್ಜರಿ ಮಾಡಿದವುಗಳು) ನಗದೀಕರಿಸಿಕೊಳ್ಳಲಾಗಿತ್ತು.

ತತ್‌ಕ್ಷಣ 1957–1961ರ ಅವಧಿಯ ವಿಶೇಷ ಲೆಕ್ಕಪರಿಶೋಧನೆಗೋಸ್ಕರ ಕಂಪನಿಯು ಸನ್ನದಿತ ಲೆಕ್ಕಿಗರ (ಚಾರ್ಟರ್ಡ್ ಅಕೌಂಟೆಂಟ್ಸ್) ಸಂಸ್ಥೆಯೊಂದನ್ನು ನೇಮಿಸಿತು. ಕಂಪನಿಯ ಮುಖ್ಯ ಲೆಕ್ಕಾಧಿಕಾರಿ ಆ ಅವಧಿಯಲ್ಲಿ ಸುಮಾರು 42 ಚೆಕ್ಕುಗಳಿಂದ ಸುಮಾರು ರೂ. 3.26 ಲಕ್ಷ ಹಣ ಪಡೆದಿದ್ದಾನೆ ಎನ್ನುವ ಹೇಳಿಕೆಯೊಂದಿಗೆ, ಅದು ತನ್ನ ವರದಿಯನ್ನು ಸಲ್ಲಿಸಿತು.

ಕೆನರಾ ಬ್ಯಾಂಕು (ಒಂದನೆಯ ಪ್ರತಿವಾದಿ) ಮತ್ತು ವೈ. ವಿ. ಭಟ್ (ಎರಡನೆಯ ಪ್ರತಿವಾದಿ) ಇವರ ಮೇಲೆ ಕಂಪನಿ ಕೂಡಲೇ ರೂ. 3.26 ಲಕ್ಷ ವಸೂಲಿಗಾಗಿ ದಾವೆಯನ್ನು ಹೂಡಿತು. ಈ ವ್ಯಾಜ್ಯದಲ್ಲಿ ಕಂಪನಿ ಮತ್ತು ಬ್ಯಾಂಕು ತೆಗೆದುಕೊಂಡ ನಿಲುವುಗಳನ್ನು ನೋಡೋಣ.

### ಕಂಪನಿಯ ವಾದ

ಕಂಪನಿ ಈ ಮುಂದಿನ ವಾದವನ್ನು ಮುಂದೊಡ್ಡಿತು: (1) ಚೆಕ್ಕುಗಳಾವುವೂ ಅಧಿಕೃತವಾಗಿರಲಿಲ್ಲ. (2) ಕಂಪನಿಯ ವತಿಯಿಂದ ಅನುಸಮರ್ಥನೆಯಾಗಲಿ, ಮೌನಸಮ್ಮತಿಯಾಗಲಿ ಇರಲಿಲ್ಲ. (3) ಹೊಸ ಲೆಕ್ಕಾಧಿಕಾರಿಗಳು ಅದನ್ನು ಕಂಡುಹಿಡಿಯುವವರೆಗೆ ಕಂಪನಿಗೆ ಈ ವಂಚನೆ—ಮೋಸ ಪ್ರಕರಣದ ಬಗೆಗೆ ತಿಳಿದಿರಲಿಲ್ಲ. (4) ಮತ್ತು, ಯಾವತ್ತೂ ಮೊಬಲಗು ಕಂಪನಿಯ ವ್ಯವಹಾರಕ್ಕಾಗಿ ಉಪಯೋಗವಾಗಿರಲಿಲ್ಲ.

### ಬ್ಯಾಂಕಿನ ವಾದ

ಬ್ಯಾಂಕು ಇದನ್ನು ಸಂಪೂರ್ಣವಾಗಿ ವಿರೋಧಿಸಿ ಈ ಕೆಳಗಿನ ವಾದವನ್ನು ಮುಂದೊಡ್ಡಿತು :

1 ಚೆಕ್ಕುಗಳು ಫೋರ್ಜರಿಯಾಗಿದ್ದರೂ ಕಂಪನಿಗೆ ತನ್ನದೇ ಆದ ನಿರ್ಲಕ್ಷ್ಯದ ಕಾರಣದಿಂದಾಗಿ ಹಣವನ್ನು ಮರಳಿ ಪಡೆಯಲು ಹಕ್ಕಿರುವುದಿಲ್ಲ.

2 ಬ್ಯಾಂಕು ಹಾಗೂ ಕಂಪನಿಗಳ ನಡುವೆ ಕಾಲಕಾಲಕ್ಕೆ ಲೆಕ್ಕಪತ್ರಗಳು ಇತ್ಯರ್ಥವಾಗಿದ್ದುವು. ಹಾಗೂ ಬ್ಯಾಂಕಿನಿಂದ ಕಳಿಸಲ್ಪಟ್ಟ ಜೂನ್ 30ರ ಮತ್ತು ಡಿಸೆಂಬರ್ 31ರ ಅರ್ಧವಾರ್ಷಿಕ ವಿವರಣ ತಃಖ್ತೆಗಳಲ್ಲಿನ ತಪ್ಪುಗಳನ್ನು 1961ರ ಮಾರ್ಚ್ ತಿಂಗಳವರೆಗೂ ಕಂಪನಿ ಪ್ರಶ್ನಿಸಿರಲಿಲ್ಲ. ಆ ಕಾರಣಕ್ಕಾಗಿ ಕಂಪನಿಗೆ ಮೊಬಲಗನ್ನು ಹಿಂದಕ್ಕೆ ಪಡೆಯಲು ಹಕ್ಕಿರುವುದಿಲ್ಲ. ಅವ್ಯವಹಾರವನ್ನು ಬ್ಯಾಂಕಿನ ಗಮನಕ್ಕೆ ತರುವಲ್ಲಿ ಕಂಪನಿ ಯಾವುದೇ ಕ್ರಮವನ್ನೂ ತೆಗೆದುಕೊಳ್ಳದೆ ನಿಷ್ಕ್ರಿಯವಾಗಿದ್ದ ಕಾರಣದಿಂದ, ಕಂಪನಿಗೆ ಭಾವಿತ ಜ್ಞಾನವಿದೆ ಎಂದು ಭಾವಿಸಬೇಕಾದ್ದರಿಂದ, ನ್ಯಾಯಾಲಯ ಕಂಪನಿಗೆ ಯಾವುದೇ ಪರಿಹಾರ ಕೊಡಕೂಡದು.

3 ಪರ್ಯಾಯವಾಗಿ, ಅಂಗೀಕಾರ ಅಥವಾ ಮೌನಸಮ್ಮತಿಯ ಕಾರಣದಿಂದ ವಿಬಂಧ ನಿಯಮದ ರೀತ್ಯ ಕಂಪನಿಗೆ ಮೊಬಲಗನ್ನು ಮರಳಿ ಪಡೆಯಲು ಹಕ್ಕಿರುವುದಿಲ್ಲ. ಯಾವಾಗ ಗ್ರಾಹಕನಿಗೆ ಬ್ಯಾಂಕಿನ ತಃಖ್ತೆಯನ್ನು ಪರೀಕ್ಷಿಸುವ ಮುಕ್ತ ಅವಕಾಶವನ್ನು ನೀಡಲಾಗುತ್ತದೆಯೋ, ಆಗ ಅಂತಹ ಖಣಿಕೆ ನಮೂದುಗಳು ಅಂತಿಮವೆಂದು ಪರಿಗಣಿಸಲ್ಪಡತಕ್ಕದ್ದು. ಅಂತಹ ಸಂದರ್ಭಗಳಲ್ಲಿ ಬ್ಯಾಂಕಿನ ಹಿತಕ್ಕೆ ವಿರುದ್ಧವಾಗಿ ಪುನಃ ಅದನ್ನು ಎತ್ತಲು ಅವಕಾಶ ನೀಡಬಾರದು.

4 ಚೆಕ್ಕುಗಳು ಫೋರ್ಜರಿಯಾಗಿವೆ ಎಂದು ತಿಳಿದ ಮೇಲೆ ಬ್ಯಾಂಕಿಗೆ ಅವುಗಳ ಬಗ್ಗೆ ಮಾಹಿತಿ ನೀಡುವದು ಗ್ರಾಹಕನ ಕರ್ತವ್ಯ. ಪರಿಣಾಮದಲ್ಲಿ, ವಾಸ್ತವಿಕ ಜ್ಞಾನವಿರುವ ವ್ಯಕ್ತಿಗೂ ಭಾವಿತ ಜ್ಞಾನವಿರುವ ವ್ಯಕ್ತಿಗೂ ಕಾನೂನಿನ ದೃಷ್ಟಿಯಲ್ಲಿ ಯಾವದೇ ಭೇದವಿಲ್ಲ. ಭಾವಿತ ಜ್ಞಾನವಿರುವವನೂ ಸಹ ನಿರ್ಲಕ್ಷ್ಯದಿಂದಿದ್ದರೆ, ಯಾವುದೇ ಅನುಕೂಲ ಪಡೆಯಕೂಡದು.

5 ಕಂಪನಿಯ ಅಧಿನಿಯಮದನ್ವಯ ಅಗತ್ಯವಾದ ಹಲವಾರು ವರ್ಷಗಳಿಂದ ಕಂಪನಿಯ ಆಢಾವೆ

ಪಶ್ನದ ಲೆಕ್ಕಪರಿಶೋಧನೆಯಾಗಿದೆ. ಆ ಮೂಲಕ ಕಂಪನಿಯ ವಿವಿಧ ಲೆಕ್ಕ ಪುಸ್ತಕಗಳು, ವೋಚರುಗಳು ಪರಿಶೀಲಿತವಾಗಿದ್ದು, ಬ್ಯಾಂಕಿನಿಂದ ದೊರೆತ ವಿವರಣ ತಃಖ್ತೆಗಳು ಸರಿಯಾಗಿದ್ದವೆಂದು ಅವರು ಒಪ್ಪಿರುವುದು ಇದರಿಂದ ಸ್ಪಷ್ಟವಾಗುತ್ತದೆ.

6 ಕಡ್ಡಾಯವಾಗಿ ಮಾಡಬೇಕಾಗಿದ್ದ, ಚೆಕ್ಕುಗಳ ಪ್ರತಿ ಹಾಳೆಗಳನ್ನು ಪರಿಶೋಧಿಸುವಲ್ಲಿ ಕಂಪನಿ ತೋರಿದ ನಿರ್ಲಕ್ಷ್ಯವು ವಿಬಂಧ ಹಾಗೂ ಅಂಗೀಕಾರ ಮತ್ತು ಅನುಸಮರ್ಥನೆಯಾಗುವುದರಿಂದಲೂ ಕಂಪನಿಯ ಮೊಬಲಗನ್ನು ಮರಳಿ ಪಡೆಯಲಾಗುವುದಿಲ್ಲ.

## ನ್ಯಾಯಾಲಯದ ತೀರ್ಪು

ಕೆಳ ನ್ಯಾಯಾಲಯು ಕಂಪನಿಯ ಪರವಾಗಿ ತನ್ನ ತೀರ್ಪನ್ನು ಇತ್ತು, 6% ಬಡ್ಡಿಯೊಂದಿಗೆ ವ್ಯಾಜ್ಯದಲ್ಲಿ ಕೇಳಲ್ಪಟ್ಟ ಮೊತ್ತವನ್ನು ನೀಡಿ ಡಿಕ್ರಿಯನ್ನು ನೀಡಿತು. ಇದರ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಮಾಡಿದ ಅಪೀಲಿನಲ್ಲಿ ಉಚ್ಚನ್ಯಾಯಾಲಯ ಕೆಳ ನ್ಯಾಯಾಲಯದ ತೀರ್ಪನ್ನು ಎತ್ತಿಹಿಡಿಯಿತು. ಈ ತೀರ್ಪಿನ ವಿರುದ್ಧ ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸುವ ಬಗ್ಗೆ ಬ್ಯಾಂಕು ಮಾಡಿಕೊಂಡ ಮನವಿಯನ್ನು, "ಸಾರ್ವಜನಿಕ ಮಹತ್ವದ ಮುಖ್ಯವಾದ ಕಾನೂನಿನ ಪ್ರಶ್ನೆ" ಎಂದು, ಅದರಲ್ಲಿ ಅಡಕವಾಗಿರುವ ದೃಷ್ಟಿಯಿಂದ, ಪುರಸ್ಕರಿಸಿ, ಅಪೀಲು ಸಲ್ಲಿಸಲು ಅವಕಾಶ ನೀಡಿತು. ಈ ತೆರನಾಗಿ ಈ ವ್ಯಾಜ್ಯ ಸರ್ವೋಚ್ಚ ನ್ಯಾಯಾಲಯದ ಕಟ್ಟೆಯನ್ನು ಏರಿತು.

ಸರ್ವೋಚ್ಚ ನ್ಯಾಯಾಲಯ ಈ ವ್ಯಾಜ್ಯವನ್ನು ಕೂಲಂಕಷವಾಗಿ ಪರಿಶೀಲಿಸಿತು. ಇಲ್ಲಿ ವಂಚನೆ ಆಗಿರುವುದು ನಿರ್ಲಕ್ಷ್ಯದ ಕಾರಣದಿಂದಲ್ಲ ಎಂದು ಹೇಳುತ್ತ, ಹಿಂದಿನ ತೀರ್ಪೊಂದನ್ನು ಉದಾಹರಿಸುತ್ತ, ಅದು ಈ ರೀತಿ ಹೇಳಿತು :

"ಚೆಕ್ಕಿನ ಮೇಲಿನ ಸಹಿ ನೈಜವಾಗಿದ್ದ ಪಕ್ಷದಲ್ಲಿ ಗ್ರಾಹಕನಿಂದ ಬ್ಯಾಂಕಿಗೆ ಹಣವನ್ನು ಕೊಡಲು ಆದೇಶವಿರುತ್ತದೆ. ಆದರೆ ಸಹಿಯು (ಒಂದು ಸಹಿಯಾಗಿದ್ದರೂ ಸಹ) ನೈಜವಾಗಿಲ್ಲದ ಪಕ್ಷದಲ್ಲಿ ಬ್ಯಾಂಕಿನ ಹಣವನ್ನು ಕೊಡುವ ಬಗ್ಗೆ ಯಾವದೇ ಆದೇಶವಿರುವದಿಲ್ಲ. ಅಂಥ ಸಂದರ್ಭಗಳಲ್ಲಿ ಗ್ರಾಹಕನ ನಿರ್ಲಕ್ಷ್ಯದ ಪ್ರಶ್ನೆ ಉದ್ಭವಿಸದು. ಚೆಕ್ ಪುಸ್ತಕಗಳನ್ನು ಇಟ್ಟಿರುವ ಬಗೆಗಿನ ನಿರ್ಲಕ್ಷ್ಯ ಇತ್ಯಾದಿ ಪ್ರತಿವಾದವನ್ನು ಮುಂದೊಡ್ಡುವಂತಿಲ್ಲ."

ಮುಂದೆ ನ್ಯಾಯಾಲಯವು ಪಾಸ್ ಪುಸ್ತಕಗಳನ್ನು ಮತ್ತು ಚೆಕ್‌ಗಳ ಪ್ರತಿ ಹಾಳೆಗಳನ್ನು ಪರೀಕ್ಷಿಸುವ ಗ್ರಾಹಕನ ಹೊಣೆಯನ್ನು ಕುರಿತು ವಿಮರ್ಶಿಸುತ್ತ, ಅಂಥ ಹೊಣೆಗಾರಿಕೆ ಇದೆ ಎಂಬುದನ್ನು ಸ್ವೀಕರಿಸಿತು. ಆದರೆ ಕೇವಲ ನಿರ್ಲಕ್ಷ್ಯವಿದೆ ಎಂಬ ಕಾರಣಕ್ಕೆ ಗ್ರಾಹಕನಿಂದ ನಿರ್ಲಕ್ಷ್ಯವಾಗಿದೆ ಎಂಬ ಪೂರ್ವಭಾವನೆ ಸಲ್ಲದು. ಆದರೆ ಗ್ರಾಹಕ ತನ್ನ ವರ್ತನೆಯಿಂದ ಫೋರ್ಜರಿಯ ಚೆಕ್ಕುಗಳ ಹಣ ಪಾವತಿಯಾಗುವದಕ್ಕೆ ಅನುಕೂಲತೆಯನ್ನು, ಅವಕಾಶವನ್ನು ಕಲ್ಪಿಸಿಕೊಟ್ಟಲ್ಲಿ, ಆತನಿಗೆ ಮೊಬಲಗು ಪಡೆಯಲು ಹಕ್ಕಿರುವದಿಲ್ಲ. ಅಂತಹ ಸಂದರ್ಭಗಳನ್ನು ಬಿಟ್ಟು, ಕೇವಲ ನಿರ್ಲಕ್ಷ್ಯ ಎಂಬ ಕಾರಣವೊಂದಕ್ಕಾಗಿ ಬ್ಯಾಂಕಿನ ವಿರುದ್ಧ ದಾವೆ ಹೂಡಲು ಆತನನ್ನು ಪ್ರತಿಬಂಧಿಸುವುದಿಲ್ಲ.

ಬ್ಯಾಂಕು ಎತ್ತಿದ ಮೌನಸಮ್ಮತಿಯ ವಾದವನ್ನು ನ್ಯಾಯಾಲಯ ತಳ್ಳಿಹಾಕಿತು. ಅಂತಹ ವಾದವನ್ನು ಎತ್ತಿಹಿಡಿಯಲು ಗ್ರಾಹಕನು, ಸತ್ಯ ಸಂಗತಿ ಬೆಳಕಿಗೆ ಬಂದಾಗ್ಯೂ, ಮೌನವಾಗಿದ್ದಾನೆ ಎಂಬುದನ್ನು ಪುರಾವೆ ಮಾಡಬೇಕಾಗುತ್ತದೆ. ಈ ವ್ಯಾಜ್ಯದಲ್ಲಿ 42 ಚೆಕ್ಕುಗಳ ಫೋರ್ಜರಿ ಸಹಿಮಾಡಿ ಹಣ ಪಡೆದ ವಿಷಯ ಕಂಪನಿಗೆ ತಿಳಿದಿರಲಿಲ್ಲ. ವಂಚನೆಯ ಜ್ಞಾನವಿದ್ದಾಗ್ಯೂ ತಃಖ್ತೆಯ ಸರಿತನವನ್ನು ಒಪ್ಪಿದ್ದರೆ ಮಾತ್ರ ಅಂತಹ ವಾದವನ್ನು ಎತ್ತಿಹಿಡಿಯಬಹುದಾಗಿತ್ತು. ವಂಚನೆ ಬೆಳಕಿಗೆ ಬಂದ ತಕ್ಷಣ ಕಂಪನಿಯು ತನಿಖೆಗೆ ಆದೇಶ ನೀಡಿತು.

ನೌಕರರ ಕಾರ್ಯಗಳಿಗೆ ಕಂಪನಿಯು ಬದಲಿ ಹೊಣೆಯಾಗುವ ಕಾರಣಕ್ಕೆ, ಕಂಪನಿಗೆ ವ್ಯಾಜ್ಯ ಹೂಡಲು ಯಾವದೇ ಹಕ್ಕಿಲ್ಲ ಎಂಬ ವಾದವನ್ನು ನ್ಯಾಯಾಲಯ ತಳ್ಳಿಹಾಕಿತು.

## ಕೆಲವು ಅನಿಸಿಕೆಗಳು

ಇಂಗ್ಲೆಂಡ್, ಭಾರತಗಳಲ್ಲಿ ಈ ಕುರಿತು ಕಾನೂನು ಬೆಳೆದು ಬಂದಿರುವದನ್ನು ಗಮನಿಸಿದಾಗ, ಸರ್ವೋಚ್ಚ ನ್ಯಾಯಾಲಯದ ಈ ತೀರ್ಪಿನ ಬಗ್ಗೆ ಯಾರೂ ಆಕ್ಷೇಪ ಎತ್ತುವಂತಿಲ್ಲ.

ಈ ತೀರ್ಪಿನ ಹಿನ್ನೆಲೆಯಲ್ಲಿ ಯಾವದೇ ಸಂಸ್ಥೆ ಅಥವಾ ಸಂಸ್ಥೆಗಳಲ್ಲಿ ಇರಬೇಕಾದ ಹದ್ದುಬಸ್ತಿನ ವ್ಯವಸ್ಥೆಯ ಬಗ್ಗೆ ಪುನರ್ ಪರಿಶೀಲನೆ ಮಾಡಬೇಕಾಗುತ್ತದೆ. ಇಲ್ಲಿ ನಿಯತವಾಗಿ ಲೆಕ್ಕಪರಿಶೋಧಕರು ಲೆಕ್ಕದ ಪರಿಶೋಧನೆ ಮಾಡಿದಾಗ್ಯೂ ಯಾವದೇ ತಪ್ಪುಗಳನ್ನು ಏಕೆ ಕಂಡುಹಿಡಿಯಲಾಗಿಲ್ಲ ? ಹಾಗಾದರೆ ಸಾಮಾನ್ಯ ಸಹಾಯಕನೊಬ್ಬನಿಗೆ ಇಂಥ ಬೃಹತ್ ವಂಚನೆಯ ಪ್ರಕರಣವನ್ನು ಕಂಡುಹಿಡಿಯುವುದು ಹೇಗೆ ಸಾಧ್ಯವಾಯಿತು ? ಹಾಗಾದರೆ, ಸಾಮಾನ್ಯ ಸಹಾಯಕನೊಬ್ಬನಿಗೆ ಕಂಡ, ಸ್ಪಷ್ಟ ಮತ್ತು ಗೋಚರವಾಗುವ, ಸುಳ್ಳು ನಮೂದುಗಳನ್ನು ಸರಿಯೆಂದು, ಆ ಅವಧಿಯಲ್ಲಿ ಲೆಕ್ಕಪರಿಶೋಧನೆ ನಡೆಸಿದ ಲೆಕ್ಕಪರಿಶೋಧಕರು ಹೇಗೆ ಪ್ರಮಾಣೀಕರಿಸಿದರು ? □

---

## ಗಂಡ-ಹೆಂಡಿರ ಕಥೆ

ಇಂಗ್ಲೆಂಡಿನ ಮಾರ್ಟಿನ್ಸ್ ಬ್ಯಾಂಕಿನ ಶಾಖೆಯಲ್ಲಿ ಗ್ರೀನ್‌ವುಡ್ ಎಂಬವನ ಖಾತೆಯೊಂದಿತ್ತು. ಅವನ ಪತ್ನಿ ತನ್ನ ಗಂಡನ ಚೆಕ್ ಪುಸ್ತಕವನ್ನು ತೆಗೆದುಕೊಂಡು ಗಂಡನ ಸಹಿಯ ಫೋರ್ಜರಿ (ಸೃಷ್ಟನೆ) ಮಾಡಿ ಒಟ್ಟು 44 ಚೆಕ್ಕುಗಳ ಮೇಲೆ ಹಣ ಪಡೆದಳು.

ಗ್ರೀನ್‌ವುಡ್‌ನಿಗೆ ಪತ್ನಿಯ ಕೃತ್ಯ ಗೊತ್ತಾಯಿತು. 'ನಿಮ್ಮ ದಮ್ಮಯ್ಯ, ಬ್ಯಾಂಕಿಗೆ ತಿಳಿಸಬೇಡಿ. ನನ್ನ ತಂಗಿ ಕಷ್ಟದಲ್ಲಿದ್ದಾಳೆ. ಅವಳಿಗೆ ಹಣ ಕೊಟ್ಟೆ. ನ್ಯಾಯಾಲಯದ ವ್ಯಾಜ್ಯವೊಂದರಲ್ಲಿ ಅವಳು ಗೆದ್ದ ಮೇಲೆ ನಿಮ್ಮ ಎಲ್ಲ ಹಣ ಕೊಡುತ್ತೇನೆ. ಸುಮ್ಮನಿರಿ' ಎಂದು ಅವಳು ಅಂಗಲಾಚಿದಳು.

ಏನೇ ಆಗಲಿ, ಅವಳು ತನ್ನ ಹೆಂಡತಿಯಲ್ಲವೆ ? ಅವಳನ್ನೇ ಹೇಗೆ ಬಿಟ್ಟುಕೊಡುವುದು ? ಎಂದು ಗಂಡ ತೆಪ್ಪಗಾದ.

ಹೆಂಡತಿಗೆ ಇನ್ನಷ್ಟು ಹಣ ಬೇಕಾಯಿತು. ಗಂಡ ಕೋಪಗೊಂಡ. ಇಬ್ಬರಿಗೂ ಜಗಳ ಹತ್ತಿಕೊಂಡಿತು. 'ನಿನ್ನ ಸಂಗತೀನ ಬ್ಯಾಂಕಿಗೆ ತಿಳಿಸಿಬಿಡುತ್ತೇನೆ' ಎಂದು ಗಂಡ ಹೆದರಿಸಿದ. ಹೆಂಡತಿ ಅಂಜಿ ಆತ್ಮಹತ್ಯೆ ಮಾಡಿಕೊಂಡಳು.

ಗ್ರಾಹಕನ ಸಹಿಯನ್ನು ಸೃಷ್ಟನೆ ಮಾಡಿದ ಚೆಕ್ಕಿನ ಮೇಲೆ ಬ್ಯಾಂಕು ಹಣ ಕೊಟ್ಟರೆ ಗ್ರಾಹಕ ಹೊಣೆಯಲ್ಲ ಎಂಬ ತೀರ್ಪೊಂದರ ಆಧಾರದ ಮೇಲೆ ಅವನು ಬ್ಯಾಂಕಿನ ವಿರುದ್ಧ ನ್ಯಾಯಾಲಯಕ್ಕೆ ಹೋದ.

ಗ್ರಾಹಕನ ಅಲಕ್ಷ್ಯದಿಂದಾಗಿ ಫೋರ್ಜರಿಗೆ ಅವಕಾಶವಾಗಿದ್ದರೆ ಬ್ಯಾಂಕು ಹೊಣೆಯಾಗದು ಎಂದು ನ್ಯಾಯಾಲಯ ತೀರ್ಪಿತ್ತಿತು. ಹೆಂಡತಿಯನ್ನು ಕಳೆದುಕೊಂಡ ಗ್ರೀನ್‌ವುಡ್ ಹಣವನ್ನೂ ಕಳೆದುಕೊಂಡ. 1933ರ ವ್ಯಾಜ್ಯವಿದು.

---

# ಬ್ಯಾಂಕಿಂಗ್ ವಿನಿಯಮನದ ಪಾತ್ರ ಮತ್ತು ವ್ಯಾಪ್ತಿ

ಭಾಷಾಂತರ (ಅನುಕ್ರಮವಾಗಿ) : ಬಿ. ಎಸ್. ಚಂದ್ರಶೇಖರ, ಕೆ. ಎನ್. ಮಹಾಬಲ, ನಾಗಾನಂದ, ಜಿ. ಎನ್. ನರಸಿಂಹಮೂರ್ತಿ, ಮೋ. ಕೃ. ಅನಂತಸ್ವಾಮಿ, ಟಿ. ಕೆ. ರಂಗನಾಥ, ಕೋದಂಡರಾಮ, ಹೇಮಂತ ದೇಸಾಯಿ, ಬ. ರಾ. ಸುರೇಂದ್ರ, ಜಯಂತಿ ಮನೋಹರ, ಅನ್ನಪೂರ್ಣ, ಪಾ. ರಾಜಗೋಪಾಲ, ಎಸ್. ಎಂ. ಶ್ರೀನಿವಾಸಮೂರ್ತಿ, ಡಾ. ಸೂರ್ಯನಾರಾಯಣ, ಕಮಲ.

ಮೂಲ :
## ಅರ್ನ್‌ಸ್ಟ್ ಬಾಲ್ಟೆನ್ಸ್‌ಪೆರ್ಜರ್
**ಅರ್ಥಶಾಸ್ತ್ರ ಪ್ರಾಧ್ಯಾಪಕ,
ಬರ್ನ್ ವಿಶ್ವವಿದ್ಯಾನಿಲಯ**

ಈಚಿನ ವರ್ಷಗಳಲ್ಲಿ ಬ್ಯಾಂಕಿಂಗ್ ವಿನಿಯಮನವನ್ನು ಕುರಿತ ಪ್ರಶ್ನೆಗಳಲ್ಲಿ ಮತ್ತೆ ಆಸಕ್ತಿ ಮೂಡಿದೆ. ಅಮೆರಿಕ ಸಂಯುಕ್ತ ಸಂಸ್ಥಾನ ಹಾಗೂ ಇತರ ಹಲವು ದೇಶಗಳಲ್ಲಿ ಬ್ಯಾಂಕಿಂಗ್ ಮತ್ತು ಸಂಬಂಧಿತ ಚಟುವಟಿಕೆಗಳ ವಿನಿಯಮನವನ್ನು ರದ್ದುಪಡಿಸುವ ಮತ್ತು ಪುನರ್ರಚಿಸುವ ಬಗೆಗೆ ತೀವ್ರ ಚರ್ಚೆ ನಡೆದಿದೆ. ಭಾಗಶಃ ತಂತ್ರವಿದ್ಯಾತ್ಮಕ ಬೆಳವಣಿಗೆಗಳಿಂದಾಗಿ ಹಾಗೂ ಭಾಗಶಃ ಪ್ರಚಲಿತ ವಿನಿಯಮನಗಳಿಗೆ ನವೋನವ ಪ್ರತಿಕ್ರಿಯೆಯಾಗಿ ಈಚಿನ ವರ್ಷಗಳಲ್ಲಿ ಬೃಹತ್ ಪ್ರಮಾಣದಲ್ಲಿ ಸಂಭವಿಸಿರುವ ಹಣಕಾಸು ಸಂಬಂಧಿ ಬದಲಾವಣೆಯೇ (ಅಂದರೆ–ಹೊಸ ಹಣಕಾಸು ಸಂಲೇಖಗಳು ಮತ್ತು ಸಂಸ್ಥೆಗಳು) ಇದಕ್ಕೆ ಒಂದು ಪ್ರಮುಖ ಕಾರಣ.

ಬ್ಯಾಂಕಿಂಗಿನ ವಿನಿಯಮನ ಎಷ್ಟರ ಮಟ್ಟಿಗೆ ಸಮರ್ಥನೀಯ ಮತ್ತು ಏಕೆ? ವಿನಿಯಮನಗೊಳಿಸದ ವ್ಯವಸ್ಥೆಯೊಂದು ಅನುಕೂಲತಮವಲ್ಲದ ಪರಿಣಾಮಗಳನ್ನು ಉಂಟುಮಾಡುವುದೇಕೆ? ಯಾವ ಬಗೆಯ ವಿನಿಯಮನ ಈ ಪರಿಣಾಮಗಳನ್ನು ಉತ್ತಮಗೊಳಿಸಬಲ್ಲದು ಮತ್ತು ತನ್ಮೂಲಕ ಆರ್ಥಿಕವಾಗಿ ಸಮರ್ಥನೀಯವಾಗಬಲ್ಲದು ?

## ಬ್ಯಾಂಕಿಂಗ್ ವಿನಿಯಮನದ ಹಿಂದಿರುವ ಪ್ರೇರಣೆಗಳು

ಸಾಂಪ್ರದಾಯಿಕವಾಗಿ, ಬ್ಯಾಂಕಿಂಗ್ ಕ್ಷೇತ್ರದಲ್ಲಿನ ಬಹುತೇಕ ವಿನಿಯಮನಗಳನ್ನು ಈ ಮುಂದಿನ ಎರಡು ಪರಿಗಣನೆಗಳಿಂದ ಸಮರ್ಥಿಸಿಕೊಳ್ಳಲಾಗಿದೆ: (1) ಹಣ ಪೂರೈಕೆ ಬಗ್ಗೆ ಕಾಳಜಿ ಮತ್ತು ಬೆಲೆ ಮಟ್ಟದ ನಿಯಂತ್ರಣ. ವಿನಿಯಮನವಿಲ್ಲದಿದ್ದರೆ, ಇಂಥ ನಿಯಂತ್ರಣ ಅಸಾಧ್ಯವೆಂದು ಹೇಳಲಾಗಿದೆ. ಅದರಿಂದ ಹಣಪೂರೈಕೆ ಮತ್ತು ಬೆಲೆಮಟ್ಟದಲ್ಲಿ ಅನಿಶ್ಚಿತತೆ ಉಂಟಾಗುತ್ತದೆ.ಅಥವಾ ಹಣದಾಸ್ತಾನು ಮತ್ತು ಬೆಲೆಮಟ್ಟ ಅತಿ ಹೆಚ್ಚಿನ ಅಸ್ಥಿರತೆಗೆ ಪಕ್ಕಾಗುವುದೆಂದೂ ತತ್ಪರಿಣಾಮವಾಗಿ ಇಡೀ ಅರ್ಥವ್ಯವಸ್ಥೆ ದುಬಾರಿಯಾಗುತ್ತದೆಂದೂ ಹೇಳಲಾಗಿದೆ. (2) ಬ್ಯಾಂಕ್ ಸುಭದ್ರತೆ ಬಗ್ಗೆ ಕಾಳಜಿ : ಬ್ಯಾಂಕ್ ಸುರಕ್ಷತೆಯನ್ನು ಎರಡು ದೃಷ್ಟಿಗಳಿಂದ ಮುಖ್ಯವೆಂದು ಕಾಣಲಾಗಿದೆ. ಒಂದು, ಬ್ಯಾಂಕ್ ಗ್ರಾಹಕನ (ಠೇವಣಿದಾರ) ಭದ್ರತೆ ಮತ್ತು ರಕ್ಷಣೆ; ಮತ್ತೊಂದು, ಬ್ಯಾಂಕ್ ದಿವಾಳಿ ಭೀತಿ ಹಾಗೂ ಬಿಕ್ಕಟ್ಟುಗಳ ನಿವಾರಣೆ. ಇವುಗಳಲ್ಲಿ ಮೊದಲನೆಯದು ಪ್ರತಿಯೊಂದೂ ಬ್ಯಾಂಕಿನ ಹಾಗೂ ಅದರ ಗ್ರಾಹಕರ ಸುರಕ್ಷತೆಯನ್ನು ಕುರಿತದ್ದಾಗಿದೆ, ಮತ್ತು ಇತರ ಕ್ಷೇತ್ರಗಳಲ್ಲಿ ಗ್ರಾಹಕ ಸುರಕ್ಷೆ ಹಾಗೂ ಸಂರಕ್ಷಣೆ ಕುರಿತ ಕಾಳಜಿಗಳನ್ನು ಹೋಲುತ್ತದೆ. ಎರಡನೆಯದು ಇಡೀ ಬ್ಯಾಂಕಿಂಗ್ ವ್ಯವಸ್ಥೆಯ ಸುರಕ್ಷತೆಯನ್ನು ಕುರಿತದ್ದಾಗಿದೆ.

## ವಿನಿಯಮನ ಮತ್ತು ಹಣಸಂಬಂಧಿ ನಿಯಂತ್ರಣ :

### ಎ) ಮೀಸಲು ಅಗತ್ಯಗಳು

ಹಣ ದಾಸ್ತಾನು ನಿಯಂತ್ರಣ ಮತ್ತು ಸ್ಥೂಲ ಆರ್ಥಿಕ ಸ್ಥಿರತೆಗೆ ಯಾವುದೇ ಬಗೆಯ ವಿನಿಯಮನಗಳು ಆವಶ್ಯಕವೇ ಅಥವಾ ಉಪಯುಕ್ತವಾಗಿ ಯಾದರೂ ಇವೆಯೇ ? ಈ ಶೀರ್ಷಿಕೆಯಡಿಯಲ್ಲಿ ಸಾಮಾನ್ಯವಾಗಿ ಪ್ರಸ್ತಾಪಿಸಲಾಗುವ ಅತ್ಯಂತ ಮುಖ್ಯ ವಿನಿಯಮನ ಉಪಾಯವೆಂದರೆ ಮೀಸಲು ಅಗತ್ಯವನ್ನು ಜಾರಿಗೆ ತರುವುದು. ಪ್ರವೇಶ ನಿರ್ಬಂಧಗಳ ಅಥವಾ ಠೇವಣಿಗಳ ಮೇಲಣ ಬಡ್ಡಿ ಪಾವತಿಗಳನ್ನು ಮಿತಿಗೊಳಿಸುವಂಥ ಇತರ ನಿರ್ಬಂಧಗಳನ್ನು ಜಾರಿಗೆ ತರುವ ಸಾಧ್ಯತೆಗಳನ್ನು ಈ ದೃಷ್ಟಿಯಿಂದ ಕೆಲವು ವೇಳೆ ಪರಿಶೀಲಿಸಲಾಗುವುದು.

ಹಣ ಸಂಬಂಧಿ ಮೊತ್ತಗಳ ನಿಯಂತ್ರಣಕ್ಕೆ ಇವು ಅಗತ್ಯವೇ ? ಅಗತ್ಯ ಮೀಸಲು ಅನುಪಾತವೊಂದು, ಅದನ್ನು ಜಾರಿಗೆ ತಂದ ನಂತರ ಎಂದೂ ಬದಲಾವಣೆಯಾಗದಿದ್ದರೂ ಹಣಪೂರೈಕೆ ಮತ್ತು ಬೆಲೆ ಮಟ್ಟವನ್ನು ಸೀಮಿತಗೊಳಿಸಲು ಆವಶ್ಯಕವೆಂದು ಪದೇಪದೇ ವಾದಿಸಲಾಗಿದೆ. ಮೀಸಲು ಅಗತ್ಯವಿಲ್ಲದಿದ್ದರೆ, ಹಣ ಆಧಾರದ ನಿಯಂತ್ರಣದ ಮೂಲಕ ಹಣ ಹಾಗೂ ಉದರಿ ಸೃಷ್ಟಿಯ ಮೇಲೆ ಪರಿಣಾಮಕಾರಿ ನಿರ್ಬಂಧ ಇರಲಾರದು ಎಂದು ಭಾವಿಸಲಾಗಿದೆ. ಏನೇ ಇರಲಿ, ಕನಿಷ್ಠಪಕ್ಷ ಸದ್ಯದ ತಂತ್ರಜ್ಞಾನಾತ್ಮಕ ಪರಿಸರದಲ್ಲಿಯಂತೂ ಈ ಕಾಳಜಿ ಸರಿಯಲ್ಲ.

ಮೀಸಲು ಅಗತ್ಯ ಇರದಿದ್ದಾಗ್ಯೂ, ಚಲಾರ್ಥ ಬೇಡಿಕೆಯ ರೂಪದಲ್ಲಾಗಲಿ (ಹಲವು ವಹಿವಾಟುಗಳಲ್ಲಿ ವಿನಿಮಯ ಮಾಧ್ಯಮವಾಗಿ ಚಲಾರ್ಥದ ತೌಲನಿಕ ಅನುಕೂಲದಿಂದಾಗಿ) ಮತ್ತು/ಅಥವಾ ಬ್ಯಾಂಕು ಮೀಸಲುಗಳ ಬೇಡಿಕೆಯ ರೂಪದಲ್ಲಾಗಲಿ (ಠೇವಣಿ ಹಾಗೂ ಮೀಸಲು ಹಿಂಪಡೆತಗಳ ನಷ್ಟ ಸಂಭವದಿಂದಾಗಿ) ಆಧಾರ ಹಣಕ್ಕೆ ಇತ್ಯಾತ್ಮಕ ಬೇಡಿಕೆಯಿರುತ್ತದೆ. ಮೀಸಲು ಅಗತ್ಯ ಇದ್ದಾಗ ಇರುವುದಕ್ಕಿಂತ ಅದಿಲ್ಲದಿದ್ದಾಗ ಮೀಸಲುಗಳಿಗಾಗಿ ಬ್ಯಾಂಕು ಬೇಡಿಕೆ ಭಿನ್ನವಾಗಿರುತ್ತದೆ ಎಂಬುದಂತೂ ನಿಜ. ಅದು ಈ ಮುಂದಿನ ಅಂಶಗಳನ್ನು ಅವಲಂಬಿಸುವುದೆಂದು ನಿರೀಕ್ಷಿಸಬೇಕು—ಹಣ ಮಾರುಕಟ್ಟೆಯ ಪರಿಪೂರ್ಣತೆಯ ಮಟ್ಟ—ಇಡೀ ಬ್ಯಾಂಕಿಂಗ್ ವ್ಯವಸ್ಥೆಯ ನಿವ್ವಳ ಮೀಸಲು ಸೋರಿಕೆಯ ನಷ್ಟ ಸಂಭವ (ಈ ನಷ್ಟ ಸಂಭವದ ನಿವಾರಣೆಗೆ ಹಣ ಮಾರುಕಟ್ಟೆಯ ಪರಿಪೂರ್ಣತೆ ಸಹಾಯಕವಾಗದು) ಹಾಗೂ—ಬ್ಯಾಂಕಿಂಗ್ ವ್ಯವಸ್ಥೆಗೆ ಒಗ್ಗಿರುವ, ಕೇಂದ್ರ ಬ್ಯಾಂಕು ಒದಗಿಸುವ ಮೂಲ ಹಣರೂಪದ ಸಹಾಯದ ಮಟ್ಟ. ಹೇಗಿದ್ದಾಗ್ಯೂ ಮೀಸಲಾತಿ ಅಗತ್ಯ ಇಲ್ಲದಿದ್ದಾಗಲೂ, ಮೂಲಹಣದಂತಹ ಸಂಕುಚಿತ ಹಣಮೊತ್ತದ ಮೇಲಿನ ಸಾಪೇಕ್ಷ ನಿಯಂತ್ರಣ ತಾತ್ವಿಕವಾಗಿ ಹಣದಾಸ್ತಾನು ಮತ್ತು ಬೆಲೆ ಮಟ್ಟವನ್ನು (ಖಾಸಗಿ ಹಣಕಾಸು ವ್ಯವಸ್ಥೆ ನೀಡುವ ಬಹುವೈವಿಧ್ಯಮಯವಾದ ಹಾಗೂ ಬೃಹತ್ತಾದ ಇತರ ಹಣ ಮತ್ತು ಉದರಿ ಸಂಲೇಖಗಳಿದ್ದಾಗ್ಯೂ) ನಿಯಂತ್ರಿಸಲು ಸಾಕಾಗುತ್ತದೆ.

ಸ್ವಿಸ್ ಬ್ಯಾಂಕ್ ಕಾರ್ಪೊರೇಷನ್‌ನ 'Economic and Financial Prospects' ಏಪ್ರಿಲ್ / ಮೇ 1987ರ ಸಂಚಿಕೆಯ ಲೇಖನ—The Role and Scope of Banking Regulation

## ಸ್ಥೂಲ ಅರ್ಥವ್ಯವಸ್ಥಾತ್ಮಕ ಚಲಗಳ ಚಲಾತ್ಮಕತೆಯ ಮೇಲೆ ಅವು ಪರಿಣಾಮ ಬೀರುವುವೆ ?

ಅರ್ಥವ್ಯವಸ್ಥೆಯಲ್ಲಿನ ಗೊತ್ತು ಗುರಿಯಿಲ್ಲದ ವ್ಯತ್ಯಯಗಳಿಂದ ಉಂಟಾಗುವ ಹಣದಾಸ್ತಾನು ಮತ್ತು ಇತರ ಸ್ಥೂಲ ಅರ್ಥವ್ಯವಸ್ಥಾತ್ಮಕ ಚಲಗಳ ಚಲಾತ್ಮಕತೆಯ ಮೇಲೆ ಮೀಸಲು ಅಗತ್ಯಗಳ ಮಟ್ಟ ಪರಿಣಾಮ ಬೀರಬಲ್ಲದು. ಈ ದೃಷ್ಟಿಯಲ್ಲಿ ಉನ್ನತ ಮೀಸಲು ಅಗತ್ಯಗಳು ಅನುಕೂಲಕರವೆಂದು ಸಾಮಾನ್ಯವಾಗಿ ಭಾವಿಸಲಾಗಿದೆ. (ಶೇ. 100ರಷ್ಟು ಮೀಸಲಿನ ಪರಮಾವಧಿ ಪ್ರಸ್ತಾಪವು ಈ ದೃಷ್ಟಿಗೆ ಉತ್ತಮ ನಿದರ್ಶನ). ಅಂತಿಮ ಗುರಿಗಳಾಗಿ ಅಲ್ಪಕಾಲೀನ ಹಣದಾಸ್ತಾನು ಸ್ಥಿರತೆಯ ಪ್ರತ್ಯೇಕ ಪರಿಗಣನೆಯಿಂದ ಒಟ್ಟು ಬೇಡಿಕೆ ಮತ್ತು ಬೆಲೆ ಮಟ್ಟದ ಸ್ಥಿರತೆಯತ್ತ ದೃಷ್ಟಿಯನ್ನು ಒಮ್ಮೆ ಬದಲಾಯಿಸಿದರೆ ಉನ್ನತ ಮೀಸಲು ಅಗತ್ಯದ ಹಿರಿಮೆಯನ್ನು ನಿದರ್ಶಿಸುವುದು ಅನೇಕ ವೇಳೆ ನಾವು ಭಾವಿಸುವಷ್ಟು ಸುಲಭವಲ್ಲ.

ಠೇವಣಿಗಳಿಗಾಗಿ ಸಾರ್ವಜನಿಕ ಬೇಡಿಕೆ, ಬ್ಯಾಂಕುಗಳಿಂದ ಠೇವಣಿಗಳ ಪೂರೈಕೆ, ಸಾರ್ವಜನಿಕರಿಂದ ಚಲಾರ್ಥಕ್ಕಾಗಿ ಬೇಡಿಕೆ ಅಥವಾ ಕೇಂದ್ರ ಬ್ಯಾಂಕಿನಿಂದ ಮೂಲಹಣದ ಪೂರೈಕೆ ಇವುಗಳಲ್ಲಿ ವ್ಯತ್ಯಯವಾಗುವುದೇ ಎಂಬುದನ್ನು ಅವಲಂಬಿಸಿ ಬೆಲೆಯ ಮಟ್ಟ ಅಥವಾ ಉತ್ಪನ್ನ ಮಾರುಕಟ್ಟೆಯ ಸ್ಥಿರತೆ, ಇವುಗಳ ಮೇಲೆ ಉನ್ನತ ಮೀಸಲು ಅಗತ್ಯದ ಪರಿಣಾಮ ಅನುಕೂಲಕರವಾಗಿರಬಹುದು, ಅಥವಾ ಅನುಗತ ಪರಿಣಾಮವಿಲ್ಲದಿರಬಹುದು.[1] ಅನನುಕೂಲಕರವಾಗಿರಬಹುದು. ಉದಾಹರಣೆಗೆ, ಠೇವಣಿ ಬೇಡಿಕೆಯಲ್ಲಾಗುವ ಬದಲಾವಣೆಯ ಸಂದರ್ಭದಲ್ಲಿ ಆಂಶಿಕ ಮೀಸಲು ವ್ಯವಸ್ಥೆಯು (ಶೇಕಡ 100 ಮೀಸಲು ವ್ಯವಸ್ಥೆಯ ವಿರುದ್ಧವಾಗಿ) ಹಣ ವಲಯಕ್ಕೆ ನೀಡುವ ಹೆಚ್ಚಿನ ಸ್ಥಿತಿಸ್ಥಾಪಕತೆಯು ಅನನುಕೂಲವಾಗಿರುವುದಕ್ಕಿಂತ ಅನುಕೂಲಕರವೇ ಆಗಿರುತ್ತದೆ. ಠೇವಣಿ ಬೇಡಿಕೆಯಲ್ಲಿನ (ಮುಂಗಾಣದ) ಮೇಲ್ಮುಖ ಬದಲಾವಣೆ ಠೇವಣಿಗಳ ಮಟ್ಟದ ಏರಿಕೆಯ (ಮತ್ತು ಠೇವಣಿ ದರದ ಇಳಿತದ) ಪ್ರವೃತ್ತಿಯನ್ನು ಧ್ವನಿಸುತ್ತದೆ. ತಮ್ಮ ಮೀಸಲು ದಾಸ್ತಾನನ್ನು ಹೆಚ್ಚಿಸುವ ಸಲುವಾಗಿ ಬ್ಯಾಂಕುಗಳು ಸರ್ಕಾರಿ ಹಣವನ್ನು ಸಾರ್ವಜನಿಕರಿಂದ ಹೆಚ್ಚಿನ ಬೆಲೆಗಾದರೂ ಕೊಳ್ಳಬೇಕಾಗುತ್ತದೆ ಎಂಬುದು ಇದರ ಅರ್ಥ. ಹೀಗಾಗಿ, ಮೀಸಲು ಅನುಪಾತ ಕಡಿಮೆ ಇದ್ದಷ್ಟೂ ಮೂಲಹಣದ ಪೇಟೆಯಲ್ಲಿ ಅದರಿಂದಾಗುವ ವ್ಯತ್ಯಯ ಕಡಿಮೆಯಾಗಿರುತ್ತದೆ. ಅರ್ಥವ್ಯವಸ್ಥೆಯ ಉಳಿದ ಭಾಗದ ಮೇಲೆ ಆಗುವ ಪರಿಣಾಮ ಅಂತಹುದೇ.

ಮೂಲ ಹಣದ ಪೂರೈಕೆಯು ಗೊತ್ತುಗುರಿಯಿಲ್ಲದೆ ಬದಲಾವಣೆಯಾಗುವ ಸಂದರ್ಭದಲ್ಲಿ ಪರಿಸ್ಥಿತಿ ಬೇರೆಯದಾಗಿರುತ್ತದೆ ಎಂಬುದು ನಿಜ. ಈ ಸಂದರ್ಭದಲ್ಲಿ ತಮ್ಮ ಹೆಚ್ಚುವರಿ ಮೀಸಲುಗಳ ಪೂರೈಕೆಯನ್ನು ಹೆಚ್ಚಿಸಿಕೊಳ್ಳಲು ಬ್ಯಾಂಕುಗಳಿಗೆ ಪ್ರೇರಣೆ ಎಷ್ಟರಮಟ್ಟಿಗೆ ಇರುವುದಿಲ್ಲವೋ ಅಷ್ಟರ ಮಟ್ಟಿಗೆ ಸಾರ್ವಜನಿಕರು ಅದನ್ನು ಚಲಾರ್ಥದ ರೂಪದಲ್ಲಿ ಹೊಂದುವಂತೆ ಅಥವಾ ಅದರ ಹಲವು ಮಡಿಯಷ್ಟನ್ನು ಠೇವಣಿಗಳ ರೂಪದಲ್ಲಿ ಹೊಂದುವಂತೆ ಸಾರ್ವಜನಿಕರನ್ನು ಪ್ರೇರೇಪಿಸಬೇಕು. ಮೀಸಲು ಅನುಪಾತ ಕಡಿಮೆ ಇದ್ದಷ್ಟೂ ಹೀಗೆ ಆಗುವುದು ಹೆಚ್ಚಬೇಕು. ಒಟ್ಟಾರೆ ಹೇಳುವುದಾದರೆ ಇಲ್ಲಿ ಚರ್ಚಿಸಲಾಗಿರುವ ರೀತಿಯ ಸ್ಥಿರತೆಯ ನಿರ್ಣಾಯಕದ ಆಧಾರದ ಮೇಲೆ ಕಡಿಮೆ ಅಥವಾ ಹೆಚ್ಚು ಮೀಸಲು ಅಗತ್ಯದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವುದು ಕಠಿಣ ಮತ್ತು ಬಹುಶಃ ಸೂಕ್ತವಲ್ಲ.

## ಬಿ) ಇತರ ವಿನಿಯಮನಗಳು

ಬ್ಯಾಂಕಿಂಗ್ ಕ್ಷೇತ್ರಕ್ಕೆ ಮುಕ್ತ ಪ್ರವೇಶ ಮತ್ತು ಮುಕ್ತ ಅನಿಯಂತ್ರಿತ ಸ್ಪರ್ಧೆ ಇವು ಸಾಮಾನ್ಯವಾಗಿ ಬ್ಯಾಂಕಿಂಗ್ ಮತ್ತು ಹಣ ಪೂರೈಕೆಯ ನಿಯಂತ್ರಣವನ್ನು ಅಸಾಧ್ಯಗೊಳಿಸುತ್ತದೆ ಎಂದು ಕೆಲವೇಳೆ ಅಂಜಲಾಗಿದೆ. ಅನಿಯಂತ್ರಿತ ಬ್ಯಾಂಕುಗಳು ಮತ್ತು ಮುಕ್ತ ಪ್ರವೇಶದಿಂದ ಹಣದ ಮತ್ತು "ಹಣ ಸಮಾನಕಗಳ" ಅನಿಯಂತ್ರಿತ ಸೃಷ್ಟಿಗೆ ಮತ್ತು ತತ್ಫಲವಾಗಿ ದ್ರವತ್ವಕ್ಕೆ ಎಡೆ ಮಾಡಿಕೊಡುತ್ತವೆ ಎಂಬುದು ಇಲ್ಲಿ ಅಡಕವಾಗಿರುವ ವಾದಸರಣಿಯ ತಿರುಳು. ಮೂಲತಃ ಇಲ್ಲಿ ಅಂತರ್ಗತವಾಗಿರುವ ಸಂಗತಿ ಎಂದರೆ, ಮೂಲ ಹಣದ ಪೂರೈಕೆಯ ಅಭಾವ (ಎಂದರೆ ಇದು ಒಟ್ಟು ಹಣದ ಪರೋಕ್ಷ ನಿಯಂತ್ರಣವನ್ನು ಸೂಚಿಸುತ್ತದೆ) ಮತ್ತು ಮೂಲಹಣದ ಬಳಕೆಯ ವಿಚಾರದಲ್ಲಿ ಬ್ಯಾಂಕುಗಳ ನಡುವಣ ಸ್ಪರ್ಧೆ (ಮೂಲ ಹಣಕ್ಕಾಗಿ ಬೇಡಿಕೆಯಲ್ಲಿ ಸ್ಪರ್ಧೆ) ಇವುಗಳ ನಡುವಣ ಗೊಂದಲ.

ಮೂಲಹಣದ (ಮತ್ತು ಒಟ್ಟು ಹಣದ) ಪೂರೈಕೆಯ ಮೇಲಣ ನಿಯಂತ್ರಣಕ್ಕೆ ಬ್ಯಾಂಕಿಂಗ್ ಕ್ಷೇತ್ರದೊಳಕ್ಕೆ ನಿಯಂತ್ರಿತ ಪ್ರವೇಶದ ಅಗತ್ಯವಿಲ್ಲ. ಅಂತೆಯೇ ಠೇವಣಿ ದರಗಳು, ಇತ್ಯಾದಿಗಳ ವಿನಿಯಮನದ ಅಗತ್ಯವೂ ಇಲ್ಲ. ತಾತ್ವಿಕವಾಗಿ ಹೇಳುವುದಾದರೆ ಬ್ಯಾಂಕುಗಳ ನಡುವಣ ಸ್ಪರ್ಧೆಯಿಂದ, ಮಾರುಕಟ್ಟೆಯಲ್ಲಿ ಭಾಗವಹಿಸುವವರು, ತಮ್ಮಲ್ಲಿರುವ ಸಂಪನ್ಮೂಲಗಳನ್ನು ಮಿತವ್ಯಯಕಾರಿ ಹಾಗು ದಕ್ಷರೀತಿಯಲ್ಲಿ ಬಳಸುವಂತೆ ಆಗುವುದರಿಂದ ಇದು ಯಾವುದೇ ಬೇರೆ ಉದ್ಯಮದ ಸದಸ್ಯರ ನಡುವಣ ಸ್ಪರ್ಧೆಯಷ್ಟೇ ಉಪಯುಕ್ತವಾಗಿರುವಂತೆ ತೋರುತ್ತದೆ. ಏನೇ ಇರಲಿ, ಈ ಪ್ರಸ್ತಾಪ ಮೂಲತಃ ಸಕಾರಣವೆಂದು ಕಂಡರೂ ಬ್ಯಾಂಕು ಸುರಕ್ಷತೆ ಎಂಬ ಶೀರ್ಷಿಕೆಯಡಿಯಲ್ಲಿ ಇದರ ಕೆಲವು ಮಗ್ಗುಲುಗಳನ್ನು ಮತ್ತಷ್ಟು ಪರೀಕ್ಷಣೆಗೆ ಒಳಪಡಿಸಬಹುದೆಂದು ಕಾಣುತ್ತದೆ. ಇದು ಈ ಲೇಖನದ ಎರಡನೆಯ ಭಾಗದ ವಿಷಯವಾಗಿದೆ. ಬ್ಯಾಂಕಿಂಗ್‌ನಲ್ಲಿಯ ಹೇರಳವಾದ ವಿನಿಯಮನಗಳನ್ನು ಬ್ಯಾಂಕ್ ಸುರಕ್ಷತೆಯ ದೃಷ್ಟಿಯಿಂದ ಸಾಂಪ್ರದಾಯಿಕವಾಗಿ ಸಮರ್ಥಿಸಿಕೊಳ್ಳಲಾಗಿದೆ. ಇಂಥದರ ಮುಖ್ಯ ಉದಾಹರಣೆಗಳೆಂದರೆ ಕಡ್ಡಾಯ ಠೇವಣಿ ವಿಮೆ, ಬಂಡವಾಳ ಅಗತ್ಯಗಳು, ಪ್ರವೇಶ ನಿರ್ಬಂಧಗಳು, ದ್ರವತ್ವ ಅಗತ್ಯಗಳು ಮತ್ತು ಇತರ ನಾನಾ ಬಗೆಯ ವಿಭಾಗೀಯ ನಿರ್ಬಂಧಗಳು (ವೈವಿಧ್ಯೀಕರಣ ನಿಯಮಗಳು ಇತ್ಯಾದಿ). ಬ್ಯಾಂಕ್ ಸುರಕ್ಷತೆಯ ಬಗೆಗಿನ ಕಾತರಗಳಿಗೆ ಮೂಲವು ಸಾಮಾನ್ಯವಾಗಿ ಮಾಹಿತಿ ಸಂಬಂಧಿ ಸಮಸ್ಯೆಗಳಲ್ಲಿದೆ. ಈಚಿನ ವರ್ಷಗಳಲ್ಲಿ ಬಹಳಷ್ಟು ಮಹತ್ವಕ್ಕೆ ಒಳಗಾಗಿರುವ ಈ ಮುಂದಿನ ವಾದವು ಬ್ಯಾಂಕು ಮತ್ತು ಬ್ಯಾಂಕ್ ಗ್ರಾಹಕನ ನಡುವಣ ಮಾಹಿತಿ ವಿಷಮತೆಗಳನ್ನು ಕುರಿತ ಊಹೆಯನ್ನು ಅವಲಂಬಿಸಿದೆ. ಠೇವಣಿದಾರರು ಬ್ಯಾಂಕ್ ಆಸ್ತಿಗಳ ಗುಣಮಟ್ಟವನ್ನು ಮತ್ತು ತನ್ಮೂಲಕ ವಿವಿಧ ಬ್ಯಾಂಕುಗಳ ಸುಸ್ತಿ ಸಂಭಾವ್ಯತೆಯನ್ನು ತಕ್ಕಮಟ್ಟಿಗೆ ನಿರ್ಣಯಿಸಲು ಅಸಮರ್ಥರಾಗಿದ್ದಾರೆಂದು ಹೇಳಲಾಗಿದೆ. ಎಂದರೆ ಹೆಚ್ಚಿನ ಗುಣಮಟ್ಟದ ಬ್ಯಾಂಕುಗಳಿವೆಯೆಂಬುದು ಠೇವಣಿದಾರರಿಗೆ ಗೊತ್ತು. ಆದರೆ ಯಾವುದು ಯಾವುದೆಂಬುದನ್ನು ಹೇಳಲು ಅವರು ಅಸಮರ್ಥರಾಗಿದ್ದಾರೆ.

## ಮಾಹಿತಿ ವಿಷಮತೆ

ಅಂತಹ ವಿಷಮತೆ, ಅದು ಇರುವೆಡೆಯಲ್ಲಿ, ಮಾರುಕಟ್ಟೆಗಳ ಕುಸಿತಕ್ಕೆ ಅಥವಾ ಮಾರುಕಟ್ಟೆಯ ಸಮತೋಲಗಳ ಅಸಾಮಾನ್ಯ ಬಗೆಗಳಿಗೆ ಎಡೆಕೊಡಬಹುದು ಎಂಬುದು ಈಚಿನ ವರ್ಷಗಳ ಮಾಹಿತಿ ಅರ್ಥಶಾಸ್ತ್ರ ಸಂಶೋಧನೆಯಿಂದ ವ್ಯಕ್ತವಾಗಿದೆ. ಇಂಥ ವಿಷಮತೆಯಿಂದ ವಿಶೇಷ ಸಮಸ್ಯೆಯ ಸೃಷ್ಟಿಯಾಗುತ್ತದೆ ಎಂಬುದನ್ನು ಬ್ಯಾಂಕಿಂಗ್‌ನಲ್ಲಿ ತೋರಿಸಿಕೊಡಲಾಗಿದೆ. ಗಮನಕ್ಕೆ ಬಂದ ಬ್ಯಾಂಕ್ ದಿವಾಳಿಯೊಂದು ಬ್ಯಾಂಕಿಂಗಿಗೇ ನಿರ್ದಿಷ್ಟವಾದ ಕಾರಣಗಳಿಂದ ಉಂಟಾಗದೆಯೋ ಅಥವಾ ಅದು ಸಮಗ್ರ ಬ್ಯಾಂಕಿಂಗ್ ವ್ಯವಸ್ಥೆಯ ನಷ್ಟ ಸಂಭಾವ್ಯತೆಯ ಬದಲಾವಣೆಯ ದ್ಯೋತಕವೋ ಎಂಬ ಪ್ರಶ್ನೆಯನ್ನು ಠೇವಣಿದಾರನಲ್ಲಿ ಮೂಡಿಸುತ್ತದೆ. ಹೀಗೆ ಒಂದು ರೀತಿಯ 'ಬಾಹ್ಯತ್ವ' ಉದ್ಭವಿಸು

---

1 ವಿವರಗಳಿಗೆ ನೋಡಿ: ಇ. ಬಾಲ್ಟೆನ್ ಸ್ಪೆರ್ಜರ್ ಅವರ "Reserve requirements and Economic stability", *Journal of Money, Credit and Banking*. 14, 1982

ತ್ತದೆ (ಎಂದರೆ, ಇದಕ್ಕೆ ಕಾರಣವಾದ ಬಾಹ್ಯ ಪರಿಸ್ಥಿತಿಗಳು ಕಾಣಿಸಿಕೊಳ್ಳುತ್ತವೆ). 'ಕೆಟ್ಟ' ಬ್ಯಾಂಕುಗಳ ಅಸ್ತಿತ್ವದಿಂದ ಒಳ್ಳೆಯ ಬ್ಯಾಂಕುಗಳಿಗೆ ಘಾಸಿಯಾಗಬಹುದು. ಇದು ಸಾಮಾನ್ಯವಾಗಿ ಸಂಪನ್ಮೂಲಗಳ ಅನಿಯತ ಹಂಚಿಕೆಗೆ ನಷ್ಟ ಸಂಭಾವ್ಯತೆಯನ್ನು ವಹಿಸಿಕೊಳ್ಳುವ ಅನುಕೂಲತಮವಲ್ಲದ ಮಟ್ಟಕ್ಕೆ ಎಡೆಮಾಡಿಕೊಡಬಹುದು, ಹಾಗೂ ಬ್ಯಾಂಕು ನುಗ್ಗಲುಗಳ ಅಪಾಯಕ್ಕೂ ಎಡೆಮಾಡಿಕೊಡಬಹುದು: ಮತ್ತು ಹೀಗೆ, ಬ್ಯಾಂಕಿಂಗ್ ವ್ಯವಸ್ಥೆಯ ಹಾಗೂ ಹಣಪೂರೈಕೆಯ ಕುಸಿತ–ವಿನಾಶಗಳ ಸಂಭಾವ್ಯತೆಯನ್ನು ಉಂಟುಮಾಡಬಹುದು. ಇದರಿಂದ ಸಮಾಜಕ್ಕೆ ಹೆಚ್ಚು ನಷ್ಟವಾಗುತ್ತದೆ.

## ಬ್ಯಾಂಕ್ ದಿವಾಳಿಗಳು ಸಾಂಕ್ರಾಮಿಕವಾಗಬಹುದು

ಈ ಬಗೆಯ ವಾದದ ಪ್ರಕಾರ ಬ್ಯಾಂಕಿಂಗಿಗೆ ವಿಶಿಷ್ಟವಾದ್ದೇನೆಂದರೆ ಬ್ಯಾಂಕ್ ದಿವಾಳಿಗಳ 'ಸಾಂಕ್ರಾಮಿಕ ಸ್ವರೂಪ' ಎಂದರೆ ಇಡೀ ಬ್ಯಾಂಕಿಂಗ್ ವ್ಯವಸ್ಥೆಯ ಮೇಲೆ ಬ್ಯಾಂಕೊಂದರ ದಿವಾಳಿಯಿಂದ ಉಂಟಾಗಬಹುದಾದ ಪರಿಣಾಮಗಳು. ಈ ಚಿಂತನೆ ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ಕಾಲದಲ್ಲೂ ಬ್ಯಾಂಕಿಂಗ್ ವಿನಿಯಮನದ ಸಮರ್ಥನೆಯ ತಿರುಳಾಗಿದೆ. ಬ್ಯಾಂಕ್ ದಿವಾಳಿಗಳ ಮತ್ತು ಠೇವಣಿದಾರರ ನಷ್ಟಗಳ ಸಾಧ್ಯತೆಯೊಂದೇ ಬ್ಯಾಂಕಿಂಗನ್ನು ಇತರ ಕ್ಷೇತ್ರಗಳಿಂದ ಹೆಚ್ಚು ಭಿನ್ನವಾಗಿಸುವುದಿಲ್ಲ. ಯಾವುದೇ ಸಂಸ್ಥೆಯ ಸಾಲಿಗ ಅಥವಾ ಷೇರುದಾರ ಈ ಬಗೆಯ ನಷ್ಟಗಳನ್ನು ಅನುಭವಿಸಬಹುದು. ಆದರೆ ವಿನಿಯಮನಗಳನ್ನು—ಕನಿಷ್ಠ ಪಕ್ಷ ಬ್ಯಾಂಕಿಂಗ್‌ನಲ್ಲಿ ಪರಂಪರೆಯಾಗಿ ಬಂದ ಬಗೆಯ ವಿನಿಯಮನಗಳನ್ನು—ಜಾರಿಗೆ ತರಬೇಕೆಂಬ ವ್ಯಾಪಕ ಕರೆಗೆ ಸಾಮಾನ್ಯವಾಗಿ ಇದು ಎಡೆಮಾಡಿಕೊಡುವುದಿಲ್ಲ.

ಇಡೀ ಬ್ಯಾಂಕಿಂಗ್ ಮತ್ತು ಉದರಿ ವ್ಯವಸ್ಥೆಯ ಭದ್ರತೆಯ ಮೇಲೆ ಆಗುವ ಒಂದೊಂದೂ ಬ್ಯಾಂಕ್ ದಿವಾಳಿಗಳ ಭವಪರಿಣಾಮವೇ ವಿನಿಯಮನ ಕುರಿತ ಕಾಳಜಿಗೆ ಆಧಾರವಾಗುತ್ತದೆ. ಈ ಸಮಸ್ಯೆಗೆ ಇರುವ ಉತ್ತಮ ಪರಿಹಾರವೇನು ಎಂಬುದೇ ಈಗ ನಮ್ಮ ಮುಂದಿರುವ ನಿರ್ಣಾಯಕ ಪ್ರಶ್ನೆ.

ಆಗಾಗ ಬರುತ್ತಿರುವ ಪ್ರಸ್ತಾಪವೆಂದರೆ, ಯಾವುದಾದರೊಂದು ಬಗೆಯ ಠೇವಣಿ ವಿಮೆ ಯೋಜನೆ. ಇಂಥ ವಿಮೆಗೆ ವಿವಿಧ ಅತಿರಿಕ್ತ ನಿಯಂತ್ರಣಗಳನ್ನು (ಸಾಕಷ್ಟು ಬಂಡವಾಳದ ಅಗತ್ಯಗಳು, ಪ್ರವೇಶ ನಿರ್ಬಂಧಗಳು ಇತ್ಯಾದಿ) ಸೇರಿಸಬಹುದು ಅಥವಾ ಸೇರಿಸದಿರಬಹುದು. ಅಥವಾ ಅದು ಇವುಗಳಿಂದ ಪುನಸ್ಸ್ಥಾಪಿತವಾಗಬಹುದು.

**ವಿನಿಯಮನದ ಹಿಂದಿನ ಉದ್ದೇಶಗಳು**

↓ ಹಣ ಪೂರೈಕೆ ಮತ್ತು ಬೆಲೆಮಟ್ಟ ನಿಯಂತ್ರಣ ↓

ವಿಧಾನಗಳು
ಮೀಸಲು ಅಗತ್ಯಗಳು
ಪ್ರವೇಶ ನಿರ್ಬಂಧಗಳು
ಬಡ್ಡಿ ನಿರ್ಬಂಧಗಳು

↓ ಬ್ಯಾಂಕ್ ಸುರಕ್ಷತೆ ↓

ವಿಧಾನಗಳು
ಠೇವಣಿ ವಿಮೆ
ಬಂಡವಾಳ ಅಗತ್ಯಗಳು
ದ್ರವತ್ವ ಅಗತ್ಯಗಳು
ಸರಕಾರಿ ನಿಯಂತ್ರಣ

## ಠೇವಣಿ ವಿಮೆ

ಠೇವಣಿ ವಿಮೆ ಹಲವಾರು ರೂಪಗಳನ್ನು ತಳೆಯಬಹುದು. ಸಾಮಾನ್ಯ ಕರೆ ಇರುವುದು ಸರ್ಕಾರಿ ವಿಮೆಗೆ, ಸರ್ಕಾರಿ ಅಭಿಕರಣವೊಂದರಿಂದ. ಕಡ್ಡಾಯ ಠೇವಣಿಯಿಲ್ಲದೆ ಇರುವಂಥ ರಾಷ್ಟ್ರಗಳಲ್ಲಿ ಸರ್ಕಾರದಿಂದ ಅಥವಾ ಕೇಂದ್ರ ಬ್ಯಾಂಕಿನಿಂದ ವ್ಯಕ್ತ ಅಥವಾ ಧ್ವನಿತ ಖಾತರಿಯು ಕಡ್ಡಾಯವಿಮೆಯ ಸ್ಥಾನವನ್ನು ಪಡೆಯಬಹುದು. ಒಂದು ರೀತಿ ವಿಮಾಕೂಟದ ಮೂಲಕ ಬ್ಯಾಂಕಿಂಗ್ ವ್ಯವಸ್ಥೆ ಒಟ್ಟಾಗಿ ವಿಮೆಯನ್ನು ಒದಗಿಸಬಹುದು. ಠೇವಣಿದಾರನ ದೃಷ್ಟಿಯಿಂದ ಬ್ಯಾಂಕಿನ ದಿವಾಳಿ ಸಂಭಾವ್ಯತೆಯಿಂದ ಮುಕ್ತವಾಗಿ ಎಲ್ಲಾ ಠೇವಣಿಗಳನ್ನು ಠೇವಣಿ ವಿಮೆ ಸಮಾನವಾಗಿ ಆಕರ್ಷಿತಗೊಳಿಸುತ್ತದೆ, ವಿಭಿನ್ನ ಗುಣಮಟ್ಟಗಳ ಬ್ಯಾಂಕುಗಳ ನಡುವೆ ವ್ಯತ್ಯಾಸವನ್ನು ಠೇವಣಿದಾರನು ಗುರುತಿಸಲು ಮತ್ತು ಇಂಥ ವ್ಯತ್ಯಾಸಗಳನ್ನು ಠೇವಣಿದಾರ ಕಂಡಿದ್ದರೆ ಠೇವಣಿದಾರನಿಗೆ ಪಾವತಿ ಮಾಡಿದ ಬಡ್ಡಿದರದಲ್ಲಿ ವಿಶಿಷ್ಟವಾದ ನಷ್ಟ ಸಂಭಾವ್ಯತೆಯ ಪ್ರೀಮಿಯಮ್ಮನ್ನು ಬ್ಯಾಂಕ್ ಪರಿಗಣಿಸುವ ಅಗತ್ಯವನ್ನು ಅದು ನಿವಾರಿಸುತ್ತದೆ. ಬ್ಯಾಂಕ್ ದಿವಾಳಿಯ ಸಂದರ್ಭದಲ್ಲಿ ವಿಮಾ ಆಸ್ಥೆಯ ಠೇವಣಿದಾರನಿಗೆ ವಿಮಾಸಂಸ್ಥೆ ನಷ್ಟ ತುಂಬಿಕೊಡುತ್ತದೆ. ತನ್ಮೂಲಕ ಅರ್ಥವ್ಯವಸ್ಥೆ ಹೊಂದಿರುವ ಠೇವಣಿ ಮತ್ತು ಹಣದ ಮೇಲಿನ ಹಿಡಿತ ದಿವಾಳಿಯ ನೇರ ಪರಿಣಾಮವನ್ನು ತಡೆಗಟ್ಟುತ್ತದೆ. ಅತ್ಯಂತ ಮುಖ್ಯವಾಗಿ, ಬೇರೆ ಬ್ಯಾಂಕುಗಳಲ್ಲಿ ಠೇವಣಿದಾರರು ತಮ್ಮ ಠೇವಣಿಗಳ ಸುರಕ್ಷತೆಯ ಬಗ್ಗೆ ಆತಂಕ ಹೊಂದಬೇಕಾದ ಅಗತ್ಯ ಇದರಿಂದ ನಿವಾರಣೆಯಾಗುತ್ತದೆ. ಮತ್ತು ಹೀಗೆ, ಶ್ರೇಣಿಕ್ರಿಯೆ ಮತ್ತು ಬ್ಯಾಂಕಿಂಗ್ ವ್ಯವಸ್ಥೆ ಕುಸಿತದ ಭೀತಿ ಮಾಯವಾಗುತ್ತದೆ.

## ಯಾವ ವಿಮಾ ಶುಲ್ಕಗಳು ?

ಠೇವಣಿ ವಿಮಾ ವ್ಯವಸ್ಥೆಯೊಂದು ಜಾರಿಯಲ್ಲಿದ್ದಾಗ ಮೂಲಭೂತ ಪ್ರಶ್ನೆಯೊಂದು, ವಿಮಾ ಶುಲ್ಕಗಳನ್ನು ಯಾವ ರೀತಿ ನಿರ್ಧರಿಸಲಾಗುತ್ತದೆ ಎಂಬುದನ್ನು ಕುರಿತಿರುತ್ತದೆ. ದಕ್ಷತೆಯಿಂದ ಸಂಘಟಿತವಾದ ವಿಮಾಸಂಸ್ಥೆಯೊಂದು ಬ್ಯಾಂಕಿನ ದಿವಾಳಿತನದ ನಷ್ಟಸಂಭಾವ್ಯತೆಗೆ ಅನುಗುಣವಾಗಿ ಮತ್ತು ತತ್ಪರಿಣಾಮವಾಗಿ ಬ್ಯಾಂಕಿನ ಆಸ್ತಿಗಳ ವಿಭಾಗದ ನಷ್ಟಸಂಭಾವ್ಯತೆ ಹಾಗೂ ಅದರ ಬಂಡವಾಳ ಹಿಡುವಳಿಗಳ ಪರ್ಯಾಪ್ತತೆಗೆ ಅನುಗುಣವಾಗಿ ವಿಮಾಶುಲ್ಕಗಳನ್ನು ಶ್ರೇಣೀಕರಿಸುತ್ತದೆ. ಅಧಿಕತರ ನಷ್ಟಸಂಭಾವ್ಯತೆಯ ವಿಭಾಗದ ಅಥವಾ ಅಧಿಕ ಶುಲ್ಕರೂಪದಲ್ಲಿರುವ ಬಂಡವಾಳ ಠೇವಣಿಯ ಕಡಿಮೆ ಅನುಪಾತದ ಪರಿಣಾಮಗಳನ್ನು ನಿರ್ದಿಷ್ಟ ಬ್ಯಾಂಕು ವಹಿಸಿಕೊಳ್ಳುವುದರಿಂದ ಇಂಥ ಒಂದು ಪದ್ಧತಿ ಠೇವಣಿ ವಿಮೆಯಿಂದ ಅನ್ಯತಃ ಉಂಟಾಗಬಹುದಾದ ಪ್ರೋತ್ಸಾಹಕ್ಕೆ ಪ್ರತಿಯಾದ ಪರಿಣಾಮಗಳ ಅಪಾಯವನ್ನು ಕಡಿಮೆಗೊಳಿಸುತ್ತದೆ.

ಬ್ಯಾಂಕ್ ದಿವಾಳಿ ನಷ್ಟಸಂಭಾವ್ಯತೆಗೆ ಸಂಬಂಧವಿರದ ಶುಲ್ಕಗಳಿರುವ, ಏಕರೂಪ ವಿಮಾಶುಲ್ಕ ಪದ್ಧತಿಗೆ ಇದು ಸ್ಪಷ್ಟವಾಗಿ ವಿಭಿನ್ನವಾದ ರೀತಿಯಲ್ಲಿದೆ. ಆಚರಣೆಯಲ್ಲಿ, ವ್ಯಕ್ತ ವಿಮಾ ಯೋಜನೆ ಬಹುತೇಕ ಯಾವಾಗಲೂ ಈ ಎರಡನೆಯ ರೂಪವನ್ನು ಹೊಂದುತ್ತದೆ. ಈ ವ್ಯವಸ್ಥೆಯಲ್ಲಿ ಬ್ಯಾಂಕು ತನ್ನ ಆಸ್ತಿವಿಭಾಗಗಳ ನಷ್ಟಸಂಭಾವ್ಯತೆಯನ್ನು ಹೆಚ್ಚಿಸುವುದರ ಅಥವಾ ತನ್ನ ಬಂಡವಾಳ ಅನುಪಾತವನ್ನು ಕಡಿಮೆಗೊಳಿಸುವುದರ ಪರಿಣಾಮಗಳನ್ನು ವಹಿಸಿಕೊಳ್ಳುವುದಿಲ್ಲವಾದುದರಿಂದ, ಅದು ಅನ್ಯತಃ ಹೋಗಬಹುದಾದಷ್ಟು ದೂರದ ಮಿತಿಯನ್ನು ಮೀರಿ, ಇಂಥ ನೀತಿಗಳನ್ನು ಅನುಸರಿಸಲು, ಬ್ಯಾಂಕಿಗೆ ಉತ್ತೇಜನ ಇರುತ್ತದೆ. ಹೀಗೆ, ಈ ಬಗೆಯ ಠೇವಣಿ ವಿಮೆಯು, ಬ್ಯಾಂಕುಗಳು ಅನ್ಯತಃ ಹೋಗಬಹುದಾದಷ್ಟು ದೂರದ ಮಿತಿಯನ್ನು ಮೀರಿ, ಇಂಥ ನೀತಿಗಳನ್ನು ಅನುಸರಿಸಲು ಬ್ಯಾಂಕಿಗೆ ಉತ್ತೇಜನ ಇರುತ್ತದೆ. ಹೀಗೆ, ಈ ಬಗೆಯ ಠೇವಣಿ ವಿಮೆಯು, ಅನ್ಯತಃ ಆಗುವುದಕ್ಕಿಂತ ಕಡಿಮೆ ಸುರಕ್ಷಿತವಾಗುವಂತೆ ಮಾಡುತ್ತದೆ

ವಿಮಾ ಸಂಸ್ಥೆ ಬ್ಯಾಂಕಿನ ಮೇಲೆ ಹೇರುವ ಕೆಲವೊಂದು ನಿಯಂತ್ರಣಗಳನ್ನು ಸಹಜವಾಗಿ ಇದು ಅಪೇಕ್ಷಿಸುತ್ತದೆ, ಮತ್ತು ಅಗತ್ಯವಾದ ಬಂಡವಾಳ ಮತ್ತು ದ್ರವತ್ವ ಅನುಪಾತಗಳು, ಬ್ಯಾಂಕ್ ಆಸ್ತಿಗಳ ವಿಭಾಗದಿಂದ ಕೆಲವು ನಷ್ಟಸಂಭವನೀಯ ಆಸ್ತಿಗಳ ನಿಷೇಧ, ವೈವಿಧ್ಯೀಕರಣ ನಿಯಮಗಳು—ಇವೆಲ್ಲಾ ಬ್ಯಾಂಕ್ ದಿವಾಳಿಗಳ ನಷ್ಟಸಂಭಾವ್ಯತೆಯನ್ನು ಕನಿಷ್ಠಗೊಳಿಸಲು, ಬ್ಯಾಂಕುಗಳ ಮೇಲೆ ಹೇರುವ ಇಂಥ ಎಲ್ಲ ಹೆಚ್ಚುವರಿ ನಿಯಂತ್ರಣಗಳನ್ನು ಜಾರಿಗೆ ತರುವ ವ್ಯವಸ್ಥೆಗೆ ಅನುವು ಮಾಡುವ ಪ್ರವೃತ್ತಿ ಉಳ್ಳದ್ದಾಗಿರುತ್ತವೆ. ಚಲ ಶುಲ್ಕ ವ್ಯವಸ್ಥೆಯು, ಒಂದೊಂದೂ ಬ್ಯಾಂಕ್ ದಿವಾಳಿಗಳ ನಷ್ಟಸಂಭಾವ್ಯತೆಯನ್ನಷ್ಟೇ ಲಕ್ಷ್ಯಕ್ಕೆ ತೆಗೆದುಕೊಳ್ಳುವುದಿಲ್ಲವಾದುದರಿಂದ, ಮತ್ತು, ವಿಮಾಶುಲ್ಕಗಳ ಮೇಲೆ ತಾನು ಬೀರುವ ಪ್ರಭಾವದ ಮೂಲಕ ಅದನ್ನೂ ನಿರ್ಬಂಧಿಸುವುದರಿಂದ, ಏಕರೂಪ ಶುಲ್ಕ ವ್ಯವಸ್ಥೆಯು ಈ ನಷ್ಟಸಂಭಾವ್ಯತೆಯನ್ನು ನೇರವಾಗಿ ಲಕ್ಷ್ಯಕ್ಕೆ ತೆಗೆದುಕೊಳ್ಳುವುದು, ಮತ್ತು ವಿಮಾನಿಧಿಯನ್ನು ರಕ್ಷಿಸುವ ಸಲುವಾಗಿ, ಕೆಲವೊಂದು ಮೌಲ್ಯೇತರ ಕ್ರಮಗಳ ಮೂಲಕ ಮಿತಿಗೊಳಿಸುವುದು ಅನಿವಾರ್ಯವಾಗುತ್ತದೆ.

### ಸರ್ಕಾರಿ ಖಾತರಿಗಳು

ವ್ಯಕ್ತ ಠೇವಣಿ ವಿಮೆಯ ಬದಲು ಸರ್ಕಾರ ನೀಡಿದ ವ್ಯಕ್ತ ಅಥವಾ ಧ್ವನಿತ ಖಾತರಿಯೊಂದನ್ನು ಬಳಸಬಹುದು. ಉದಾಹರಣೆಗೆ, ಬ್ಯಾಂಕುಗಳು ದಿವಾಳಿಯಾದ ಸಂದರ್ಭಗಳಲ್ಲಿ, ಅದರಲ್ಲೂ ಒಂದು ದೊಡ್ಡ ಬ್ಯಾಂಕ್ ಅಪಾಯದ ಸ್ಥಿತಿಯಲ್ಲಿದ್ದಾಗ, ಕೇಂದ್ರೀಯ ಬ್ಯಾಂಕ್ ಅಥವಾ ನೇರವಾಗಿ ಸರ್ಕಾರವೇ (ಸರಿಯಾಗಿಯೋ ಅಥವಾ ತಪ್ಪಾಗಿಯೋ) ಮಧ್ಯಪ್ರವೇಶ ಮಾಡುವುದನ್ನು ನಿರೀಕ್ಷಿಸಬಹುದು. ವ್ಯಕ್ತ ಠೇವಣಿ ವಿಮೆಯ ಸೌಲಭ್ಯವಿಲ್ಲದ ದೇಶಗಳಲ್ಲಿ ಈ ರೀತಿಯ ನಿರೀಕ್ಷೆಗಳು ಇಂದು ಬಳಕೆಯಲ್ಲಿರುವುದು ಬಹುಮಟ್ಟಿಗೆ ಸಂಭವನೀಯ. ಉದಾಹರಣೆಗೆ, ಸ್ವಿಟ್‌ಜರ್‌ಲೆಂಡ್. ಇದುವರೆಗೆ ಕ್ಯಾಂಟೊನಲ್ (ವಿಭಾಗೀಯ) ಬ್ಯಾಂಕ್‌ಗಳಲ್ಲಿರುವ ಉಳಿತಾಯ ಠೇವಣಿಗಳಿಗೆ ಸರ್ಕಾರಿ ಖಾತರಿಯನ್ನುಳಿದಂತೆ ಬೇರೆ ಯಾವ ಠೇವಣಿ ವಿಮೆಯನ್ನೂ ಹೊಂದಿರಲಿಲ್ಲ. ಉಳಿತಾಯಗಾರನಿಗೆ ಈ ಆಯ್ಕೆಯ ಸ್ವಾತಂತ್ರ್ಯವನ್ನು ಕೊಡುವುದು, ಪ್ರಾಯಶಃ ಬ್ಯಾಂಕಿಂಗ್ ವ್ಯವಸ್ಥೆಯ ಸಂರಕ್ಷಣೆಗಾಗಿ ಖಂಡಿತವಾಗಿಯೂ ಸಾಕಷ್ಟು ಆಸರೆಯಾಗುವುದು–ಬೇರೆಲ್ಲಿ ಅಲ್ಲದಿದ್ದರೂ ಸ್ವಿಟ್‌ಜರ್‌ಲೆಂಡ್‌ನಲ್ಲಾದರೂ ಇರುವ ಅನುಕೂಲಕರ ಚಾರಿತ್ರಿಕ ದಾಖಲೆ ಇಂಥ ಒಂದು ವ್ಯಾಖ್ಯಾನಕ್ಕೆ ಅನುಗುಣವಾಗಿರುತ್ತದೆ. ಏನೇ ಆಗಿರಲಿ, ಬ್ಯಾಂಕ್ ಬಿಕ್ಕಟ್ಟು ಸನ್ನಿಹಿತವಾದಾಗ, ಅಂದರೆ ದೊಡ್ಡ ಅಥವಾ ಬಹುತೇಕ ಸಂಸ್ಥೆಗಳ ದಿವಾಳಿ ಅಥವಾ ತೊಂದರೆಗಳ ಸಮಯದಲ್ಲಿ ಸರ್ಕಾರವು ಹೇಗಾದರೂ ಮಧ್ಯಪ್ರವೇಶಿಸುಸುವುದು ಎನ್ನುವ ಧ್ವನಿತ ತಿಳಿವಳಿಕೆಯಿಂದ ಇಂಥ ಒಂದು ವ್ಯವಸ್ಥೆ ನಡೆಯುವುದು ಸಾಧ್ಯವಿರಲೂಬಹುದು. ಇದು ಹೀಗಿದ್ದಲ್ಲಿ ಈ ಬಗೆಯ ಧ್ವನಿತ ವಿಮೆಗಿಂತ ದಿವಾಳಿ ನಷ್ಟಸಂಭಾವ್ಯತೆಗೆ ಸಂಬದ್ಧವಾದ ವಿಮಾಶುಲ್ಕಗಳಿರುವ ವ್ಯಕ್ತ ವಿಮಾ ವ್ಯವಸ್ಥೆ ಬಹುಶಃ ಹೆಚ್ಚು ಯುಕ್ತವಾಗಿರಬಹುದು. ಇನ್ನೊಂದೆಡೆ ಅಸ್ಪಷ್ಟತೆ ಮತ್ತು ಅನಿಶ್ಚಿತತೆಗಳಿಂದ ಕೂಡಿದ ಇಂಥ ಧ್ವನಿತ ಪರಿಹಾರ ವಿಮೆಯು ನಿರುತ್ತೇಜಕ ಪರಿಣಾಮಗಳನ್ನು ಸೀಮಿತಗೊಳಿಸುವುದರಲ್ಲಿ ಏಕರೂಪ ಶುಲ್ಕದ ವ್ಯಕ್ತ ವಿಮೆಗಿಂತ ಹೆಚ್ಚು ಸಮರ್ಥವಾಗಿರಬಹುದು.

ಸಾಮಾನ್ಯವಾಗಿ ಹೇಳುವುದಾದರೆ, ಬ್ಯಾಂಕಿಂಗ್ ವಿನಿಯಮನಕ್ಕೆ ಹೆಚ್ಚಿನ ಸಮರ್ಥನೆ ಆರೋಪಿತ ಅಂತರ್ಗತ ಮಾಹಿತಿ ಅಪರಿಪೂರ್ಣತೆಗಳ ಮೇಲೆ ನಿಂತಿರುತ್ತದೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡಿರಬೇಕು. ಮಾಹಿತಿಯನ್ನು ಸಾಕಷ್ಟು ಹೊರಗೆಡಹುವ ನೀತಿಯಿಂದ ಈ ಅಂತರ್ಗತ ಸಮಸ್ಯೆಯನ್ನು ಕಡಿಮೆ ಮಾಡಲು ಸಹಾಯವಾಗುತ್ತದೆ ಮತ್ತು ಇಂದು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬಹಳಷ್ಟು ಪ್ರಚಲಿತವಾಗಿರುವ ಅನೇಕ ಪರಿಮಾಣಾತ್ಮಕ ನಿರ್ಬಂಧನೆಗಳಲ್ಲಿ ಹಲವನ್ನು ನಿವಾರಿಸಲು ಬಹುಶಃ ಅವಕಾಶವಾಗುತ್ತದೆ.



## ಅಮೆರಿಕದಲ್ಲಿ ಠೇವಣಿ ವಿಮೆ

ಎರಡನೆಯ ಮಹಾ ಯುದ್ಧಕ್ಕೆ ಮುಂಚೆ, ಮಹಾ ಆರ್ಥಿಕ ಮುಗ್ಗಟ್ಟಿನ ಅನಂತರ, ಬ್ಯಾಂಕ್ ಸುರಕ್ಷತೆಗಾಗಿ ಠೇವಣಿ ವಿಮೆ ಯೋಜನೆಯನ್ನು ಜಾರಿಗೆ ತಂದ ಏಕೈಕ ದೇಶವೆಂದರೆ ಅಮೆರಿಕಾ. 193ರ ಬ್ಯಾಂಕಿಂಗ್ ಅಧಿನಿಯಮದಲ್ಲಿ ಇದು ಪ್ರಥಮತಃ ಜಾರಿಗೆ ಬಂತು. ಇದಕ್ಕೆ 1935ರ ಅಧಿನಿಯಮದಲ್ಲಿ ಅನೇಕ ವ್ಯಾಪಕ ಬದಲಾವಣೆಗಳನ್ನು ತರಲಾಯಿತು. ಒಕ್ಕೂಟ ಠೇವಣಿ ವಿಮಾ ನಿಗಮವೊಂದನ್ನು ಅಸ್ತಿತ್ವಕ್ಕೆ ತರಲಾಯಿತು. ಈ ಯೋಜನೆಯಲ್ಲಿ ಭಾಗವಹಿಸುವ ಪ್ರತಿಯೊಂದು ಬ್ಯಾಂಕೂ ವಾರ್ಷಿಕವಾಗಿ ತನ್ನ ಒಟ್ಟು ನಿವ್ವಳ ಠೇವಣಿಯ ಶೇಕಡ ಹನ್ನೆರಡನೆಯ ಒಂದರಷ್ಟು ಪ್ರೀಮಿಯಂ ಪಾವತಿ ಮಾಡಬೇಕೆಂದು ನಿಯಮ ಮಾಡಲಾಯಿತು. ವಿಮಾ ನಿಗಮ ಇದರ ಜೊತೆಗೆ ಸಾಲಪತ್ರಗಳೇ ಮೊದಲಾದವುಗಳ ಮೂಲಕ ಅಗತ್ಯವಾದ ಹಣ ಸಂಗ್ರಹಿಸಲು ಅಧಿನಿಯಮದಲ್ಲಿ ಅನುವು ಮಾಡಿಕೊಡಲಾಯಿತು. ಪ್ರತಿ ಠೇವಣಿದಾರನಿಗೂ 5,000 ಡಾಲರುಗಳ ವರೆಗೆ ರಕ್ಷಣೆ ದೊರಕುವಂತಾಯಿತು. ವಿಮೆ ಇಳಿಸಿದ ಬ್ಯಾಂಕುಗಳ ಪರೀಕ್ಷಣೆ ಮಾಡಲು, ಅವಕ್ಕೆ ಯುಕ್ತವೆನಿಸಿದ ನಿರ್ದೇಶನ ನೀಡಲು ವಿಮಾ ನಿಗಮಕ್ಕೆ ಅಧಿಕಾರ ನೀಡಲಾಯಿತು. ನಿಗಮಕ್ಕೆ ಕಂಡುಬಂದ ಅಕ್ರಮಗಳನ್ನು ನಿಗದಿಯಾದ ಸಮಯದೊಳಗೆ ಬ್ಯಾಂಕು ಸರಿಪಡಿಸದಿದ್ದರೆ ಅಂಥ ಬ್ಯಾಂಕಿನ ಪರೀಕ್ಷಣೆಯ ವರದಿಯ ಸದರಿ ಅಂಶಗಳನ್ನು ಪ್ರಕಟಿಸಲು ನಿಗಮಕ್ಕೆ ಅಧಿಕಾರವಿತ್ತು. ಅಭದ್ರ ಬ್ಯಾಂಕುಗಳನ್ನು ಯೋಜನಾ ವ್ಯವಸ್ಥೆಯಿಂದ ಹೊರಹಾಕಲೂ, ಅವುಗಳ ಅವಸಾಯನಕ್ಕೆ ಆದೇಶ ನೀಡಲೂ, ಸಮಾಜದ ಹಿತಕ್ಕೆ ಅನುಗುಣವಾಗಿರದ ಬ್ಯಾಂಕಿಗೆ ವಿಮಾ ಸೌಲಭ್ಯ ನೀಡದಿರಲೂ ನಿಗಮ ಅಧಿಕಾರ ಪಡೆದಿತ್ತು.

— ಎಸ್. ಕೆ. ಬಸು

(ರೀಸೆಂಟ್ ಬ್ಯಾಂಕಿಂಗ್ ಡೆವಲಪ್‌ಮೆಂಟ್ಸ್)

# ಕಾಂತೀಯ ಮಸಿ ಲಿಪಿ ಗ್ರಹಣ: ಭಾರತದಲ್ಲೆಷ್ಟು ಯಶಸ್ವಿ?

**ಚೆಕ್ಕುಗಳ ತೀರುವೆ ವಿಳಂಬವಾಗುವುದನ್ನು ತಪ್ಪಿಸಲು ತರಲಾದ ದುಬಾರಿ ವೆಚ್ಚದ ಕಾಲಿಗ್ರ ವಿಧಾನದ ಅನುಸರಣೆಯಲ್ಲಿಯ ಲೋಪದೋಷಗಳಿಂದ ಮಹಾ ಪ್ರಮಾದವೇ ಆಗಬಹುದು.**

ಮು. ಶಶಿಧರ
ಮೈಸೂರು ಬ್ಯಾಂಕು. ಕಣಕಟ್ಟೆ. 573144

"ಓಬೀರಾಯನ ಕಾಲದ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದುದರ ಪರಿಣಾಮವಾಗಿ" (ಬ್ಯಾಂ.ಪ್ರ. ಜೂನ್ 87) ಭಾರತದಲ್ಲಿ ಚೆಕ್ಕುಗಳ ತೀರುವೆ ಬಹಳ ವಿಳಂಬವಾಗುತ್ತಿದ್ದುದನ್ನು ತಪ್ಪಿಸಲು, ಕಾಂತೀಯ ಮಸಿ ಲಿಪಿ ಗ್ರಹಣ (ಕಾಲಿಗ್ರ) ವಿಧಾನದಲ್ಲಿ ಚೆಕ್ಕುಗಳ ತೀರುವಳಿಯ ಪದ್ಧತಿಯನ್ನು ಜಾರಿಗೆ ತರಲು ರಿಸರ್ವ್ ಬ್ಯಾಂಕ್ ನಿರ್ಧರಿಸಿತು. ದೆಹಲಿ, ಮುಂಬಯಿ, ಕಲ್ಕತ್ತ, ಮದರಾಸುಗಳಲ್ಲಿ ತೀರುವಳಿಗೊಳ್ಳುವ ಎಲ್ಲ ಚೆಕ್ಕುಗಳು ಮತ್ತು ಹುಂಡಿಗಳನ್ನು ಕಾಲಿಗ್ರ ತಂತ್ರಜ್ಞಾನದಲ್ಲೇ ತಯಾರಿಸಬೇಕೆಂಬ ಆದೇಶವೂ ಬಂತು. ಅದರಂತೆ ದೇಶದ ಎಲ್ಲ ಬ್ಯಾಂಕುಗಳೂ ಈ ದುಬಾರಿ ವಿಧಾನವನ್ನು ಜಾರಿಗೆ ತಂದುವು. ಕಳೆದ ಒಂದು ವರ್ಷಕ್ಕೂ ಮಿಕ್ಕಿದ ಅವಧಿಯಲ್ಲಿ ಈ ತಂತ್ರಜ್ಞಾನವನ್ನು ಅನುಸರಿಸಲಾಗುತ್ತಿದೆಯಾದರೂ, ನಿರೀಕ್ಷಿತಮಟ್ಟದ ಸುಧಾರಣೆ ಕಂಡುಬರದೆ, ತೀರುವಳಿ ಕೆಲವು ಬಾರಿ ತೊಂದರೆಗೆ ಸಿಲುಕುತ್ತಿರುವುದು ಬ್ಯಾಂಕಿಂಗ್ ವಲಯಗಳಲ್ಲಿ ಕಿರಿಕಿರಿಗೆ ಕಾರಣವಾಗುತ್ತದೆ. ದುಬಾರಿ ವಿಧಾನದಿಂದ ದುಬಾರಿ ಕಾಗದದಲ್ಲಿ ಚೆಕ್ಕನ್ನು ಮುದ್ರಿಸಿಯೂ. ಗ್ರಾಹಕರ ದೂರುಗಳನ್ನು ನಿವಾರಿಸಲು ಆಗುತ್ತಿಲ್ಲವಲ್ಲ ಎಂಬ ಚಿಂತೆಯೂ ಕಾಡುತ್ತಿದೆ.

ಹಲವು ತೊಂದರೆಗಳಿಗೆ ಕಾರಣಗಳಲ್ಲಿ ಗ್ರಾಹಕರ ನಿರ್ಲಕ್ಷ್ಯದ ಜೊತೆಗೆ ಬ್ಯಾಂಕುಗಳ ತಪ್ಪುಗಳೂ ಸೇರಿವೆ. ಜೊತೆಗೆ ಅಂಚೆ ಇಲಾಖೆಯ 'ಓಬೀರಾಯನ'ಕಾಲದ ಕೆಲವು ಕಟ್ಟಳೆಗಳು ಮತ್ತು ವಿಳಂಬ ವಿತರಣೆ ಸಹ ಸೇರುತ್ತವೆ.

'ಕಾಲಿಗ್ರ' ಚೆಕ್ಕುಗಳಿಗೆ ಬಳಸುವ ಕಾಗದ, ತಂತ್ರಜ್ಞಾನ ದುಬಾರಿ ಎಂಬ ಕಾರಣದಿಂದ ಪ್ರತಿಹಾಳೆ ಇಲ್ಲದ ಚೆಕ್ ಪುಸ್ತಕಗಳನ್ನು ಮುದ್ರಿಸುವ ಪರಿಪಾಠ ಜಾರಿಗೆ ಬಂತು. ಚೆಕ್ ವಿವರಗಳನ್ನು ಗ್ರಾಹಕರು ಬರೆದಿಟ್ಟುಕೊಳ್ಳುವಂತೆ ಪಟ್ಟಿಕೆಯನ್ನು ಮುದ್ರಿಸಲಾಯಿತಾದರೂ, ಅದರಲ್ಲಿ ಬರೆಯಲು ಇಕ್ಕಟ್ಟಾಗಿ ಕಾಣುವುದರಿಂದ ಕೆಲವು ಗ್ರಾಹಕರು ಚೆಕ್‌ಗಳ ಕಾರ್ಬನ್ ಪ್ರತಿ ತೆಗೆದು, ದುಬಾರಿಕಾಗದದ ಎರಡನೆಯ ಪ್ರತಿಯನ್ನು ತಮ್ಮಲ್ಲೇ ಇಟ್ಟುಕೊಳ್ಳ ತೊಡಗಿದರು. ಇದರಿಂದಾಗಿ, ಚೆಕ್ಕುಗಳ ಖರ್ಚು ಜಾಸ್ತಿಯಾಗಿ, ಬ್ಯಾಂಕುಗಳಿಗೆ ನಷ್ಟವಾಗತೊಡಗಿದೆ.

'ಕಾಲಿಗ್ರ'ದ ಸಂಲೇಖಗಳನ್ನು ಅಂಚೆ ಮೂಲಕ ಕಳಿಸುವಾಗ ಕಾಂತಕ್ಷೇತ್ರ ಪಟ್ಟಿ ಮುದುರದಂತೆ ನೋಡಿಕೊಳ್ಳಬೇಕು. ಆದರೆ ಮರೆತೊ, ಅಜಾಗರೂಕತೆಯಿಂದಲೊ ಕಾಂತಕ್ಷೇತ್ರ ಪಟ್ಟಿಯನ್ನು ಮುದುರಿಸುವ ಗ್ರಾಹಕರು ಹಲವರು. ಮಿಗಿಲಾಗಿ, ಅಂಚೆ ಕಛೇರಿಯಲ್ಲಿ ಉದ್ದನೆಯ ಲಕೋಟೆ ದೊರೆಯದು; ಸದ್ಯಕ್ಕೆ ಅಲ್ಲಿ ದೊರೆಯುವ ಲಕೋಟೆಯಲ್ಲಿಟ್ಟು ಕಳಿಸುವ ಸಂಲೇಖಗಳ ಕಾಂತಕ್ಷೇತ್ರಪಟ್ಟಿ ಮುದುರಲೇಬೇಕು. ಪ್ರತ್ಯೇಕ ಉದ್ದನೆಯ ಲಕೋಟೆ ಮತ್ತು ಅಂಚೆಚೀಟಿಯನ್ನು ಪಡೆದು ಸಂಲೇಖವನ್ನು ಕಳಿಸುವ ಶ್ರಮವನ್ನು ಗ್ರಾಹಕರು ವಹಿಸಿದಾಗ ಮಾತ್ರ ಈ ತೊಂದರೆಯನ್ನು ನಿವಾರಿಸಬಹುದು.

ಕಾಂತಕ್ಷೇತ್ರ ಪಟ್ಟಿಯಲ್ಲಿ ಸಹಿಯ ಗೆರೆಗಳು ಅಥವಾ ಯಾವುದೇ ಮುದ್ರೆಯ ಗುರುತುಗಳು ಇರಬಾರದು. ಹಲವು ಬಾರಿ ಗ್ರಾಹಕರು ಇದನ್ನು ಮರೆತು ಕಾಂತಕ್ಷೇತ್ರ ಪಟ್ಟಿಯಲ್ಲಿ ಅನಾವಶ್ಯಕ ಗುರುತುಗಳನ್ನು ಸೇರಿಸಿದರೆ, 'ಕಾಲಿಗ್ರ'ದ ಉದ್ದೇಶವೇ ವಿಫಲವಾಗುತ್ತದೆ.

ಸರ್ಕಾರಿ ಇಲಾಖೆಗಳು ಚೆಕ್ಕುಗಳನ್ನು ಮುದ್ರಿಸುವಾಗ ಎರಡಂಕಿ ಸಂಖ್ಯೆಯ ವಿಶಿಷ್ಟ ಗುರುತು ಸಂಖ್ಯೆಯನ್ನು ಮೊದಲೇ ಮುದ್ರಿಸಿರಬೇಕಾಗುತ್ತದೆ. ಇದರಿಂದ ವಿವಿಧ ಇಲಾಖೆಗಳ ತೀರುವಳಿಯನ್ನು ಪ್ರತ್ಯೇಕಿಸಬಹುದು. ಕೆಲವು ಬ್ಯಾಂಕುಗಳು ಈ ವಿಶಿಷ್ಟ ಸಂಖ್ಯೆಯನ್ನು ಸರಕಾರಿ ಇಲಾಖೆಗೆ ತಿಳಿಸುವ ಮುಂಚೆಯೇ, ಸರ್ಕಾರಿ ಚೆಕ್ಕುಗಳ ಮುದ್ರಣ ನಡೆದು, ವಿಶಿಷ್ಟ ಸಂಖ್ಯೆ ಬಿಟ್ಟುಹೋಯಿತು. ಅಂತಹ ಚೆಕ್‌ಗಳನ್ನು ತೀರುವಳಿಗೆ ಹಾಜರುಪಡಿಸಿದಾಗ, ಗುರುತುಸಂಖ್ಯೆ ಇಲ್ಲದ್ದರಿಂದ, ಅವು ಅನಾದರಗೊಂಡುವು. ಇದರಿಂದ ತಂತ್ರಜ್ಞಾನದ ಸರಾಗ ಬಳಕೆಗೆ ಧಕ್ಕೆಯಾಯಿತು.

ಉಡುಗೊರೆ ಚೆಕ್ಕುಗಳು ಸಹ 'ಕಾಲಿಗ್ರ'ವಿಧಾನದಿಂದ ಮುದ್ರಿಸಲ್ಪಟ್ಟಾಗ ಮಾತ್ರ, ನಾಲ್ಕು ಮಹಾನಗರಗಳಲ್ಲಿ ಅವು ತೀರುವಳಿಯಾಗುವವೆಂದು ರಿಸರ್ವ್ ಬ್ಯಾಂಕ್ ಆದೇಶಿಸಿತು. ಕೆಲವು ಬ್ಯಾಂಕುಗಳು ಹಳೆಯ ಉಡುಗೊರೆ ಚೆಕ್ಕುಗಳನ್ನೇ ಕೊಡುತ್ತಿವೆ. 'ಕಾಲಿಗ್ರ' ವಿಧಾನದಲ್ಲಿ ಉಡುಗೊರೆ ಚೆಕ್ ಮುದ್ರಿಸುವದು ದುಬಾರಿ ಎಂದು ಮನಗಂಡ ಕೆಲವು ಬ್ಯಾಂಕುಗಳು ಉಡುಗೊರೆ ಚೆಕ್ಕುಗಳನ್ನೇ ರದ್ದುಮಾಡಿದವು.

ಡ್ರಾಫ್ಟುಗಳ ಕಾಂತಪಟ್ಟಿಯಲ್ಲಿ ಶಾಖೆಯ ಗುರುತುಸಂಖ್ಯೆಯನ್ನು ಮುದ್ರಿಸಬೇಕಾಗುತ್ತದೆ. ಅಂತಹ ಸಂಖ್ಯೆಯನ್ನು ಮುದ್ರಿಸದ ಹಳೆಯ ಡ್ರಾಫ್ಟುಗಳನ್ನೇ ಇನ್ನೂ ಕೊಡಲಾಗುತ್ತಿದೆ. ತೀರುವಳಿಗೆ ನೀಡುವ ಮುನ್ನ ಶಾಖಾಸಂಖ್ಯೆಯನ್ನು ಗುರುತುಮಾಡಿ ಕಳುಹಿಸಬೇಕಾಗುತ್ತದೆ ; ಕೆಲವು ಬಾರಿ ತಪ್ಪು ಸಂಖ್ಯೆಯನ್ನು ಹಾಕಿ ಕಳುಹಿಸಿದಾಗ, ತಪ್ಪು ಪಾವತಿಯಾಗಿ, ಸಲ್ಲಬೇಕಾದ ಶಾಖೆಗೆ ಹಣ ಪಾವತಿಯಾಗದೆ ತೊಂದರೆಯಾಗುತ್ತದೆ.

'ಕಾಲಿಗ್ರ'ದ ಸತತ ಬಳಕೆಯಿಂದಾಗಿ ಮತ್ತು ಗ್ರಾಹಕರು ಅಂತಹ ಸಂಲೇಖಗಳನ್ನು ಬಳಸಬೇಕಾದಾಗ ಅನಿವಾರ್ಯವಾಗಿರುವ ನಿಯಮಗಳನ್ನು ಮನನ ಮಾಡಿಕೊಂಡಾಗ ಮಾತ್ರ, 'ಕಾಲಿಗ್ರ' ತಂತ್ರಜ್ಞಾನ ಯಶಸ್ವಿಯಾಗಬಲ್ಲದು. □

# ಸುದ್ದಿ ಸಾರ

'ರಂ'

## ಅಂಚೆ ದೂರವಾಣಿ ದರದ ಹೆಚ್ಚಳ

1988–89ಕ್ಕೆ ರೂ 549 ಕೋಟಿ ಆದಾಯ ಬರುವಂತೆ ಅಂಚೆ ಹಾಗೂ ದೂರವಾಣಿ ದರಗಳನ್ನು ಹೆಚ್ಚಿಸಲಾಗಿದೆ. ದೂರವಾಣಿ ಬಾಡಿಗೆ, ಸ್ಥಳೀಯ ಹಾಗೂ ಪರಸ್ಥಳದ ಕರೆಗಳ ದರದ ಹೆಚ್ಚಳ. ಸಾರ್ವಜನಿಕ ದೂರವಾಣಿಯನ್ನು ದುಪ್ಪಟ್ಟು ಮಾಡಿದುದರಿಂದ 500 ಕೋಟಿ ರೂಗಳ ಆದಾಯ ದೊರಕಲಿದೆ. ಮನಿ ಆರ್ಡರ್ (ಧನಾದೇಶ) ರುಸುಮು ಹಾಗೂ ನೋಂದಣಿ ಪತ್ರದ ಮೇಲಣ ಹೆಚ್ಚಿನ ಶುಲ್ಕದಿಂದ ಉಳಿದ ರೂ. 49ಕೋಟಿ ದೊರಕುವ ಅಂದಾಜಿದೆ.

## ಭಾರತೀಯ ಸ್ಟೇಟ್ ಬ್ಯಾಂಕ್ ಅನ್ಯೋನ್ಯ ನಿಧಿಗೆ ಹುಂಡಿ ವಟಾವಣೆ ಸೌಲಭ್ಯ

ಭಾರತೀಯ ಸ್ಟೇಟ್ ಬ್ಯಾಂಕ್‌ನ 'ಅನ್ಯೋನ್ಯನಿಧಿ' ವ್ಯಾಪಾರಿ ಹುಂಡಿಗಳನ್ನು ವಟಾಯಿಸಲು ಭಾರತೀಯ ರಿಸರ್ವ್ ಬ್ಯಾಂಕ್ ಅನುಮತಿ ನೀಡಿದೆ. ಅನ್ಯೋನ್ಯ ನಿಧಿ ತಾನು ಸಂಗ್ರಹಿಸಿದ ಹಣದ ಬಹುಪಾಲನ್ನು ಬಂಡವಾಳ ಮಾರುಕಟ್ಟೆಯಲ್ಲಿ ತೊಡಗಿಸುವುದಾದರೂ ಅಲ್ಪಕಾಲೀನ ವಿನಿಯೋಜನೆ ಮಾಡಲು ಇದರಿಂದ ಸಾಧ್ಯವಾಗುತ್ತದೆ.

## ಸಾರ್ವಜನಿಕ ಕ್ಷೇತ್ರದ ಅಸ್ವಸ್ಥ ಘಟಕಗಳ ಅಧ್ಯಯನ

ಸಾರ್ವಜನಿಕ ಕ್ಷೇತ್ರದಲ್ಲಿನ ಅಸ್ವಸ್ಥ ಕೈಗಾರಿಕಾ ಘಟಕಗಳ–ಸಮಸ್ಯೆಗಳನ್ನು ಅಭ್ಯಸಿಸಲು ವಿಶೇಷ ಕೋಶವೊಂದನ್ನು ಖರ್ಚು ಇಲಾಖೆಯಲ್ಲಿ ತೆರೆಯಲಾಗಿದೆ. ಸಂಬಂಧಿಸಿದ ಸಚಿವಾಲಯದ ಆದೇಶದ ಮೇರೆಗೆ ಕೋಶ ಅಸ್ವಸ್ಥ ಘಟಕಗಳ ಸಮಸ್ಯೆಗಳ ಕಾರಣಗಳನ್ನು ಗುರುತಿಸುತ್ತದೆ. ಕೋಶ ವೆಚ್ಚ ನಿಯಂತ್ರಣ, ವೆಚ್ಚ ಕಡಿತ ಹಾಗೂ ಲಾಭ ಹೆಚ್ಚಿಸುವುದರತ್ತ ಕೇಂದ್ರೀಕರಿಸುತ್ತದೆ.

## ವಸೂಲಾತಿ ವಿಳಂಬಕ್ಕೆ ಪರಿಹಾರ

ವಸೂಲಾತಿಗಾಗಿ ಸಲ್ಲಿಸಿದ ಚೆಕ್ಕುಗಳನ್ನು 10 ದಿನಗಳೊಳಗಾಗಿ ಜಮೆ ಮಾಡದಿದ್ದಲ್ಲಿ ತದನಂತರದ ಅವಧಿಗೆ ಉಳಿತಾಯ ಖಾತೆಗೆ ನೀಡುವ ದರದಲ್ಲಿ ಬಡ್ಡಿ ನೀಡಬೇಕೆಂದು ಭಾರತೀಯ ರಿಸರ್ವ್‌ಬ್ಯಾಂಕ್ ವಾಣಿಜ್ಯ ಬ್ಯಾಂಕ್‌ಗಳಿಗೆ ಆದೇಶ ನೀಡಿದೆ. ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕು ಮೊದಲ ಬಾರಿಗೆ ಗುತ್ತಿಗೆ ಕಂಪನಿಯೊಂದಕ್ಕೆ ಅವಧಿ ಸಾಲ ನೀಡಿದೆ.

## ಭಿನ್ನಕ ಬಡ್ಡಿದರ ಗರಿಷ್ಠ ಸಾಲ ಮಿತಿಯಲ್ಲಿ ಹೆಚ್ಚಳ

ಭಿನ್ನಕ ಬಡ್ಡಿದರ ಸಾಲ ಯೋಜನೆಯಡಿ ನೀಡುವ ಸಂಯುಕ್ತಸಾಲದ ಗರಿಷ್ಠಮಿತಿಯನ್ನು ರೂ 6500 ರಿಂದ ರೂ 10,000/–ಕ್ಕೆ ಹೆಚ್ಚಿಸಲು ಯೋಚಿಸಲಾಗಿದೆ. ಸಣ್ಣ ಉದ್ಯಮಗಳನ್ನು ಸ್ಥಾಪಿಸುವುದರ ಮೂಲಕ ತಮ್ಮ ಆರ್ಥಿಕ ಸ್ಥಿತಿಗತಿಯನ್ನು ಉತ್ತಮ ಪಡಿಸಿಕೊಳ್ಳಲು ಅಶಕ್ತವರ್ಗದವರಿಗಾಗಿ ಈ ಯೋಜನೆಯನ್ನು 1972ರಲ್ಲಿ ಜಾರಿಗೆ ತರಲಾಯಿತು.

## ಅಪೆಕ್ಸ್ ಬ್ಯಾಂಕ್–ಷೇರು ವಿನಿಮಯ ಸದಸ್ಯತ್ವ

ಅಮೆರಿಕನ್ ಎಕ್ಸ್‌ಪ್ರೆಸ್ ಬ್ಯಾಂಕ್ ಕಲ್ಕತ್ತಾ ಷೇರು ಮಾರುಕಟ್ಟೆಯ ಸದಸ್ಯತ್ವಕ್ಕಾಗಿ ಅರ್ಜಿ ಸಲ್ಲಿಸಿದೆ. ಇತ್ತೀಚೆಗೆ ಬ್ಯಾಂಕ್‌ಗಳು ಹಾಗೂ ಹಣಕಾಸು ಸಂಸ್ಥೆಗಳು ಷೇರು ವಿನಿಮಯ ಕೇಂದ್ರಗಳ ಸದಸ್ಯರಾಗಲೂ ಅನುಮತಿ ನೀಡಿದ್ದರೂ ವಿದೇಶಿ ಬ್ಯಾಂಕುಗಳ ಬಗ್ಗೆ ಯಾವುದೇ ನಿರ್ಧಾರ ತೆಗೆದುಕೊಂಡಿಲ್ಲ.

## ಕೃಷಿ ಕ್ಷೇತ್ರಕ್ಕೆ ಹೆಚ್ಚಿನ ಉದರಿ/ರಿಯಾಯಿತಿ

1988–89ರ ಕೇಂದ್ರ ಬಜೆಟು ಕೃಷಿಕ್ಷೇತ್ರಕ್ಕೆ ಹೆಚ್ಚಿನ ಉದರಿ ಒದಗಿಸಲು ಹಲವು ಯೋಜನೆಗಳನ್ನು ಹೊಂದಿದೆ. ಬೆಳೆ ಸಾಲದ ಮೇಲಣ ಬಡ್ಡಿ ದರವನ್ನು ಗರಿಷ್ಟ 2½% ರಿಂದ ಕನಿಷ್ಟ 1% ರಷ್ಟು ಇಳಿಸಲಾಗಿದೆ. ಬ್ಯಾಂಕುಗಳ ಕೃಷಿಕ್ಷೇತ್ರಕ್ಕೆ ನೀಡಬೇಕಾದ ಮುಂಗಡಗಳ ಪ್ರಮಾಣವನ್ನು ಒಟ್ಟು ಮುಂಗಡಗಳ ಶೇ 16ರಿಂದ 17ಕ್ಕೆ ಹೆಚ್ಚಿಸಲಾಗಿದೆ. ರೈತರಿಗೆ ಉದರಿ ಸುಗುಮವಾಗಿ ಸಿಗಲು 'ಸೇವಾ ಕ್ಷೇತ್ರ ಅನುಗಮನ' ಎಂಬ ಹೊಸ ಯೋಜನೆಯಡಿಯಲ್ಲಿ ಪ್ರತಿ ಬ್ಯಾಂಕ್ ಶಾಖೆಗೂ 15ರಿಂದ 20 ಹಳ್ಳಿಗರ ಸಮಗ್ರ ಉದರಿ ಅಗತ್ಯಗಳನ್ನು ಗುರುತಿಸಿ ಉದರಿ ನೀಡುವಂತೆ ಸೂಚಿಸಲಾಗಿದೆ.

## ಉದರಿ ನೀತಿ

ಭಾರತೀಯ ರಿಸರ್ವ್ ಬ್ಯಾಂಕ್‌ನ 'ಮಂದಿ ಋತು' ವಿನ ಉದರಿ ನೀತಿಯ ಮುಖ್ಯಾಂಶಗಳೆಂದರೆ, 91 ದಿನಗಳಿಂದ 6 ತಿಂಗಳ ವರೆಗಿನ ಸಾವಧಿ ಠೇವಣಿಗಳ ಮೇಲೆ ಶೇ 15ರಷ್ಟು ಬಡ್ಡಿದರದ ಹೆಚ್ಚಳ, ಹಿಡಿದಿಟ್ಟಿದ್ದ 744 ಕೋಟಿ ರೂಗಳ ನಗದು ಶಿಲ್ಕುನ್ನು ಬಿಡುಗಡೆ ಹಾಗೂ 30–7–1988ರಿಂದ ನಗದು ಮೀಸಲು ಅನುಪಾತದಲ್ಲಿ ಶೇ 0.5%ರಷ್ಟು ಹೆಚ್ಚಳ ಹಾಗೂ ವಿನಿಯೋಜನಾ ಖಾತಾ ವ್ಯವಸ್ಥಾಪನ ನಿಷೇಧದಿಂದಾಗಿ ಬ್ಯಾಂಕುಗಳ ಠೇವಣಿ 1,000 ಕೋಟಿ ರೂಗಳಷ್ಟು ಮರು ಹಣಕಾಸು ಪೂರೈಕೆಗೂ ಅವಕಾಶವಿದೆ.

## ಬಂಡವಾಳ ಹೆಚ್ಚಳ

1987ರಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳ ಬಂಡವಾಳವನ್ನು 200 ಕೋಟಿ ರೂಗಳಷ್ಟು ಹೆಚ್ಚಿಸಲಾಗಿದೆ. 1986 ಹಾಗೂ 1985 ರಲ್ಲಿ ತಲಾ 400 ಕೋಟಿ ರೂಗಳಷ್ಟು ಹೆಚ್ಚಳ ಮಾಡಲಾಗಿತ್ತು.

## ಐಬಿಎ ಉಳಿತಾಯ ಪ್ರವೃತ್ತಿ ಅಧ್ಯಯನ

ಭಾರತದ ಬ್ಯಾಂಕುಗಳ ಸಂಘ ನಡೆಸಿದ ಅಧ್ಯಯನವೊಂದರ ಪ್ರಕಾರ ರಾಷ್ಟ್ರೀಯ ಉಳಿತಾಯ ಪತ್ರ ಹಾಗೂ ಇಂದಿರಾ ವಿಕಾಸಪತ್ರಗಳಂತಹ ಆಕರ್ಷಕ ಯೋಜನೆಗಳಿದ್ದಾಗ್ಯೂ ವಾಣಿಜ್ಯ ಬ್ಯಾಂಕುಗಳ ಠೇವಣಿಗಳ ಬೆಳವಣಿಗೆ ಗತಿ ಕುಂಠಿತಗೊಂಡಿಲ್ಲ. 1987ರಲ್ಲಿ ಠೇವಣಿಗಳ ಬೆಳವಣಿಗೆ ಶೇ 15.6 ರಷ್ಟಿದ್ದರೂ ಗ್ರಾಮೀಣ ಠೇವಣಿದಾರ ಹಾಗೂ ಉದ್ಯಮದ ಉದ್ಯೋಗಿಗಳಿಂದ ಇನ್ನೂ ಹೆಚ್ಚಿನ ಠೇವಣಿ ಸಂಗ್ರಹಿಸಲು ಅವಕಾಶವಿದೆ. ಆದ್ಯತಾ ಕ್ಷೇತ್ರಕ್ಕೆ ಬ್ಯಾಂಕುಗಳು ನೀಡಿದ ಮುಂಗಡ ಪ್ರಮಾಣ ಒಟ್ಟು ಮುಂಗಡದ ಶೇ 45.3 ರಷ್ಟಿದ್ದು ನಿರ್ದೇಶಿತ ಗುರಿ ಶೇ 40ಕ್ಕಿಂತ ಹೆಚ್ಚಿದೆ.

## ರಾಷ್ಟ್ರೀಯ ಬಂಡವಾಳ ನಿಧಿ

ಭಾರತ ಸರಕಾರ ಹಾಗೂ ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್ ತಲಾ 10 ಕೋಟಿ ರೂಗಳನ್ನು ನೀಡಿ ರಾಷ್ಟ್ರೀಯ ಬಂಡವಾಳ ನಿಧಿ ಸ್ಥಾಪಿಸಿದೆ. ಅಸ್ವಸ್ಥವಾದ ಸಣ್ಣ ಕೈಗಾಗಾರಿಕಾ ಘಟಕಗಳ ಪುನರ್ ವಸತಿಗೆ ಬೇಕಾದ ನಿಧಿಗಳ ಶೇ 75 ರಷ್ಟನ್ನು ಶೇ 1ರ ಬಡ್ಡಿದರದಲ್ಲಿ ಈ ನಿಧಿಯಿಂದ ನೀಡಲಾಗುವುದು

## ಜೀವ ವಿಮಾ ನಿಗಮ ವಸತಿ ಯೋಜನೆ

ಭಾರತದ ಜೀವವಿಮಾ ನಿಗಮ ವ್ಯಕ್ತಿಗಳಿಗೆ ಮನೆಯನ್ನು ಕೊಳ್ಳಲು ಅಥವಾ ಕಟ್ಟಲು ಇತರೇ ಸಂಸ್ಥೆಗಳು ನೀಡುವಂಥ ಹೊಸ ಯೋಜನೆಯೊಂದನ್ನು ಜೂನ್ ವೇಳೆಗೆ ಜಾರಿಗೆ ತರಲಿದೆ.

## ವಿದೇಶಿ ವಿನಿಮಯ ಮೀಸಲು

ಏಳನೆಯ ಪಂಚವಾರ್ಷಿಕ ಯೋಜನೆಯ ಮೊದಲ ಮೂರು ವರ್ಷಗಳಲ್ಲಿ ಭಾರತದ ವಿದೇಶಿ ವಿನಿಮಯ ಮೀಸಲು ರೂಪಾಯಿಗಳ ಲೆಕ್ಕದಲ್ಲಿ 470 ಕೋಟಿ ರೂಗಳಷ್ಟು ಹೆಚ್ಚಿ ರೂ. 7,287 ಕೋಟಿ ತಲು

ಹಿನ್ನ್ರರೂ ವಾಸ್ತವ ಲೆಕ್ಕದಲ್ಲಿ ಕುಸಿದಿದೆ. ಇದಕ್ಕೆ ಕಾರಣ ಅಮೆರಿಕದ ಡಾಲರನ್ನುಳಿದು ಉಳಿದ ಎಲ್ಲ ಮುಖ್ಯ ವಿದೇಶಿ ನಾಣ್ಯಗಳಿಗೆ ಹೋಲಿಸಿ ದರೆ ರೂಪಾಯಿಯ ಮೌಲ್ಯ ಬಹಳಷ್ಟು ಕುಸಿದಿದೆ.

### ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್ ಹೊಸ ಯೋಜನೆ

ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್ ಸಣ್ಣ ಕೈಗಾರಿಕೆಗಳಿಗೆ ಹೊಸ ಪುನರ್ಧನಯೋಜನೆಯೊಂದನ್ನು ರೂಪಿಸಿದೆ. ಪರಿಯೋಜನಾ ವೆಚ್ಚ 5 ಲಕ್ಷ ಮೀರದ ಸಣ್ಣ ಕೈಗಾರಿಕೆಗಳಿಗೆ ಸ್ಥಿರಾಸ್ತಿ ಹಾಗೂ ದುಡಿಯುವ ಬಂಡವಾಳಕ್ಕಾಗಿ ಈ ಸೌಲಭ್ಯ ರಾಜ್ಯ ಹಣಕಾಸು ಸಂಸ್ಥೆ ಅಥವಾ ಕೈಗಾರಿಕಾ ಅಭಿವೃದ್ಧಿ ಸಂಸ್ಥೆಗಳ ಮೂಲಕ ದೊರೆಯುವುದು.

### ಬೇನಾಮಿ ಆಸ್ತಿ ಆಜ್ಞೆ

ಬೇನಾಮಿ ವ್ಯವಹಾರಗಳ (ಆಸ್ತಿ ವಸೂಲಿ ಹಕ್ಕು ಪ್ರತಿಬಂಧ) ಸುಗ್ರೀವಾಜ್ಞೆ 1988ರ ಪ್ರಕಾರ ಬೇನಾಮಿ ಸ್ವತ್ತೊಂದರ ನಿಜ ಮಾಲಿಕನಿಗೆ ಬೇನಾಮಿದಾರ ಮಾಲೀಕನಿಂದ ಸ್ವತ್ತಿನ ಮೇಲೆ ಹಕ್ಕು ಸಾಧಿಸುವ ಅಧಿಕಾರ ಇಲ್ಲವಾಗುತ್ತದೆ.

### ಕೆನರಾ ಬ್ಯಾಂಕ್ ಹೊಸ ಸೇವೆ

ಕೆನರಾ ಬ್ಯಾಂಕ್, ಅಮೆರಿಕನ್ ಎಕ್ಸ್‌ಪ್ರೆಸ್ ಬ್ಯಾಂಕ್ ನಡುವಣ ಒಪ್ಪಂದದಿಂದಾಗಿ ಅಂತರರಾಷ್ಟ್ರೀಯ ಪ್ರವಾಸಿಗರಿಗೆ ಕೆನರಾ ಬ್ಯಾಂಕ್ ಪ್ರವಾಸಿ ಚೆಕ್ಕುಗಳ ಉದರಿ ಕಾರ್ಡ್ ಸೌಲಭ್ಯ ನೀಡಲಿದೆ.

### ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್ ಪ್ರವರ್ತಕರ ಸಾಲಿನಲ್ಲಿ ಕಡಿತ

ಆದ್ಯತಾ ಹಾಗೂ ಅತ್ಯಾದ್ಯತಾ ಕ್ಷೇತ್ರಗಳಲ್ಲಿ ಸ್ಥಾಪಿಸಲಾಗುವ ದೊಡ್ಡ ಪರಿಯೋಜನೆಗಳಿಗೆ ಪ್ರವರ್ತಕರು ಹೂಡಬೇಕಾದ ಬಂಡವಾಳವನ್ನು ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್ ಕಡಿಮೆಗೊಳಿಸಿದೆ. 25 ಕೋಟಿ ರೂ ವರೆಗಿನ ಪರಿಯೋಜನೆಗಳಿಗೆ ಶೇ 22.5 ರಷ್ಟನ್ನು, 25ರಿಂದ 50 ಕೋಟಿ ರೂಗಳ ಪರಿಯೋಜನೆಗೆ ಶೇ 17.5ರಷ್ಟನ್ನು, ಅದಕ್ಕಿಂತ ಹೆಚ್ಚಿನ ಹಣ ಹೂಡಿಕೆಯ ಪರಿಯೋಜನೆಗಳಿಗೆ ಪ್ರವರ್ತಕರ ಪಾಲು ಶೇ 10ರಷ್ಟಿದ್ದರೆ ಸಾಕು.

### ಬಿ ಎಸ್ ಇ ಟೈಮ್ಸ್

ಬೊಂಬಾಯಿ ಷೇರು ವಿನಿಮಯ ಕೇಂದ್ರ ಬಿಎಸ್‌ಇ ಟೈಮ್ಸ್ (BSE times) (Bombay Stock Exchnge Trade Information and Market Evaluation System) ಎಂಬ ವಾರ ಪತ್ರಿಕೆಯೊಂದನ್ನು ಪ್ರಾರಂಭಿಸಿದೆ. ಈ ಪತ್ರಿಕೆ ಷೇರು ಮಾರುಕಟ್ಟೆಯ ಗುಣ ಹಾಗೂ ಪ್ರಮಾಣಗಳ ವಿಶ್ಲೇಷಣೆಯನ್ನೊಳಗೊಂಡು ವಿನಿಯೋಜಕರಿಗೆ ಪ್ರಯೋಜನಕಾರಿಯಾಗಬಹುದೆಂದು ಆಶಿಸಲಾಗಿದೆ.

### ಬಿಒಬಿ ಫಿಸ್ಕಲ್ ಸರ್ವಿಸಸ್ ಲಿ.

ಬ್ಯಾಂಕ್ ಆಫ್ ಬರೋಡ BOB Fiscal Services Ltd ಎಂಬ ಪೂರ್ಣ ಸ್ವಾಮ್ಯದ ಸಹಾಯಕ ಸಂಸ್ಥೆಯೊಂದನ್ನು ಸ್ಥಾಪಿಸಿದೆ. ಬಿ ಎಸ್ ಎಸ್ ಎಲ್ ವಣಿಕ ಬ್ಯಾಂಕಿಂಗ್, ಗುತ್ತಿಗೆ, ಹಾಗೂ ವಿನಿಯೋಜನಾ ಸಲಹಾ ಸೇವೆಗಳನ್ನು ನೀಡಲಿದೆ.

### ಗುತ್ತಿಗೆ ಕಂಪನಿಗೆ ಉದರಿ ಸೌಲಭ್ಯ ಮಾನದಂಡ

ಭಾರತೀಯ ರಿಸರ್ವ್ ಬ್ಯಾಂಕು ವಾಣಿಜ್ಯ ಬ್ಯಾಂಕುಗಳು ಗುತ್ತಿಗೆ ಕಂಪನಿಗಳಿಗೆ ನೀಡಬಹುದಾದ ಉದರಿ ಸೌಲಭ್ಯಗಳ ಬಗ್ಗೆ ಮಾನದಂಡಗಳನ್ನು ರೂಪಿಸಿದೆ. ಈ ಮಾನದಂಡದಂತೆ ವಾಣಿಜ್ಯ ಬ್ಯಾಂಕುಗಳು ಗುತ್ತಿಗೆ ಕಂಪನಿಯ ನಿವ್ವಳ ಸ್ವಂತ ನಿಧಿಯ ಮೂರು ಪಟ್ಟು ಉದರಿ ನಿಂಡಬಹುದು. ಆದರೆ ಇದು ಗುತ್ತಿಗೆ ಕಂಪನಿ ಒಟ್ಟು ಸಂಗ್ರಹಿಸಬಹುದಾದ ಸಂಪನ್ಮೂಲದ ಒಂದು ಭಾಗವೆಂದು ಪರಿಗಣಿಸಲಾಗುತ್ತದೆ.

### ಯೂರೋ-ಯೆನ್ ಸಾಲ

ಭಾರತೀಯ ಸ್ಟೇಟ್ ಬ್ಯಾಂಕ್ 15 ಬಿಲಿಯನ್ ಯೆನ್‌ಗಳ ಯೂರೋ ಯೆನ್ ಸಾಲಪತ್ರ ನೀಡಿದೆ. ಈ ರೀತಿಯ ಸಾಲಪತ್ರ ನೀಡಿದ ಮೊಟ್ಟಮೊದಲ ಸಂಸ್ಥೆ ಎಂಬ ಕೀರ್ತಿ ಭಾರತೀಯ ಸ್ಟೇಟ್ ಬ್ಯಾಂಕಿನದಾಗಿದೆ.

### ಚೀನಾ ಲಂಡನ್ ಹಣಕಾಸು ಮಾರುಕಟ್ಟೆ ಪ್ರವೇಶ

1987ರ ಪ್ರಮುಖ ಬೆಳವಣಿಗೆಯೆಂದರೆ ಚೀನಾ ಲಂಡನ್ ಹಣಕಾಸು ಮಾರುಕಟ್ಟೆಯನ್ನು ಮರು ಪ್ರವೇಶ ಮಾಡಿದ್ದು. 1949ರಿಂದ ಬ್ಯಾಂಕ್ ಆಫ್ ಇಂಗ್ಲೆಂಡಿನೊಡನಿದ್ದ ವಿವಾದ ಕೊನೆಗೊಂಡಿದ್ದಂಶ ಅಕ್ಟೋಬರ್ ತಿಂಗಳಲ್ಲಿ ಬ್ಯಾಂಕ್ ಆಫ್ ಚೈನ 200 ದಶಲಕ್ಷ ಯು ಎಸ್ ಡಾಲರ್‌ಗಳ ನೀಡಿಕೆಯೊಂದಿಗೆ ಮಾರುಕಟ್ಟೆ ಮರುಪ್ರವೇಶಿಸಿತು.

### ಭಾರತೀಯ ಸಂಜಾತರ ಬ್ಯಾಂಕ್

ದಿ ಲಿಬರ್ಟಿ ನ್ಯಾಷನಲ್ ಬ್ಯಾಂಕ್‌ನ ಪ್ರಥಮ ಶಾಖೆ ವಾಷಿಂಗ್‌ಟನ್‌ನಲ್ಲಿ ಇತ್ತೀಚೆಗೆ ಪ್ರಾರಂಭವಾಗಿದೆ. ಈ ಬ್ಯಾಂಕಿನ ವಿಶೇಷವೆಂದರೆ, ಅಲ್ಲಿ ಸೇವೆಸಲ್ಲಿಸುತ್ತಿರುವ ಭಾರತೀಯ ಸಂಜಾತರಿಗೆ ಸೇವೆ ಸಲ್ಲಿಸುವುದೇ ಆಗಿದೆ. ಉನ್ನತದರ್ಜೆಯ, ಯಶಸ್ವಿ ಭಾರತೀಯ ವೃತ್ತಿದಾರರ ಮೂರು ವರ್ಷಗಳ ಸತತ ಪರಿಶ್ರಮದ ಫಲವಿದು.

### ಬಾಯಿಪಾಕ್ಸ್

ಬ್ಯಾಂಕ್ ಆಫ್ ಇಂಡಿಯಾ ತನ್ನ ಬೊಂಬಾಯಿ, ದೆಹಲಿ, ಅಲಹಾಬಾದ್ ನಗರಗಳ ಆಯ್ದ ಶಾಖೆಗಳ ಮೇಲೆ ರಚಿಸಲಾದ ಚೆಕ್‌ಗಳ ವಸೂಲಾತಿ 24 ಗಂಟೆಗಳೊಳಾಗಿ ಸಾಧ್ಯವಾಗುವ 'BOIPAX' ಸೇವೆ ಪ್ರಾರಂಭಿಸಿದೆ. ಈ ಸೇವೆಯಡಿಯಲ್ಲಿ ಹಣ ರವಾನೆ ಹಾಗೂ ಪಾವತಿ/ಬೇಪಾವತಿ ಆದೇಶಗಳನ್ನು ಶೀಘ್ರವಾಗಿ ತಲುಪಿಸಲೂ ಉಪಯೋಗಿಸಲಾಗುವುದು.

### ಕೃಷಿ ಉದರಿ ಕಾರ್ಡ್

ದೇನಾ ಬ್ಯಾಂಕು ಮೊದಲ ಬಾರಿಗೆ ಕೃಷಿಕರಿಗಾಗಿ ಉದರಿಕಾರ್ಡ್ ಸೌಲಭ್ಯ ನೀಡಲಿದೆ. ಗ್ರಾಮೀಣ ಉದರಿ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಕೃಷಿಕ ಬ್ಯಾಂಕಿಗೆ ಹೋಗಬೇಕಾದ ಅಗತ್ಯಗಳನ್ನು ಈ ಕಾರ್ಡ್ ಕಡಿಮೆಗೊಳಿಸುತ್ತದೆ. ಕಾರ್ಡ್‌ದಾರರು ಯಾವುದೇ ಶಾಖೆ ಇರದ ನಿರ್ದಿಷ್ಟ ಮಿತಿಯೊಳಗೆ ಹಣ ತೆಗೆದುಕೊಳ್ಳುವುದರ ಜೊತೆಗೆ ಗೊಬ್ಬರ ಹಾಗೂ ಕೃಷಿ ಆವಶ್ಯಕತೆಗಳನ್ನು ಖರೀದಿಸಲು ಉಪಯೋಗಿಸಬಹುದು. ಈ ವರ್ಷ ದೇನಾಬ್ಯಾಂಕ್ ಸುವರ್ಣಮಹೋತ್ಸವ ಆಚರಿಸಲಿದ್ದು ಅದರ ನೆನಪಿಗೆ ಗ್ರಾಮೀಣ ಬ್ಯಾಂಕಿಂಗ್ ಇನ್‌ಸ್ಟಿಟ್ಯೂಟ್ ಒಂದನ್ನು ಗುಜರಾತ್‌ನಲ್ಲಿ ಸ್ಥಾಪಿಸಲಿದೆ.

### ಷೇರು ಕೊಳ್ಳಲು ಸಾಲ ಸೌಲಭ್ಯ

ಉದ್ಯೋಗಿಗಳಿಗೆ ತಮ್ಮ ಉದ್ಯಮದ ಷೇರು ಕೊಳ್ಳಲು ತಮ್ಮ ಆರು ತಿಂಗಳ ಸಂಬಳ ಅಥವಾ ರೂ 20,000ದ ವರೆಗೆ ವಾಣಿಜ್ಯಬ್ಯಾಂಕುಗಳು ಸಾಲ ನೀಡುತ್ತವೆ. ಈ ಸಾಲದ ಮೇಲೆ ಶೇ 16.5 ರಷ್ಟು ಬಡ್ಡಿ ವಿಧಿಸಲಾಗುತ್ತದೆ ಹಾಗೂ ಸಾಲ ಮರುಪಾವತಿಯಾಗುವ ವರೆಗೆ ಸಾಲಗಾರರು ಬ್ಯಾಂಕಿನ ವ್ಯವಹಾರ ನ್ಯಾಸಧಾರಿಗಳಾಗಿ ಷೇರುಗಳನ್ನು ಹೊಂದಿರುವರು.

### ವಸತಿಗಾಗಿ ಹೆಚ್ಚಿನ ಉದರಿ

ವಾಣಿಜ್ಯ ಬ್ಯಾಂಕ್‌ಗಳು ವಸತಿಗಾಗಿ ಒದಗಿಸಬೇಕಾದ ಉದರಿಯ ಪರಿಮಾಣವನ್ನು ರಿಸರ್ವ್ ಬ್ಯಾಂಕು ಹೆಚ್ಚಿಸಿದೆ. 1988ರಲ್ಲಿ 225 ಕೋಟಿ ರೂಗಳಷ್ಟು 1989ರಲ್ಲಿ 300 ಕೋಟಿ ರೂಗಳಷ್ಟು ಹಣ ತೊಡಗಿಸಬೇಕೆಂದು ರಿಸರ್ವ್‌ಬ್ಯಾಂಕ್ ಆದೇಶಿಸಿದೆ. 1987 ರಲ್ಲಿ ವಾಣಿಜ್ಯ ಬ್ಯಾಂಕುಗಳು 150 ಕೋಟಿ ರೂಗಳನ್ನು ಮಾತ್ರ ನೀಡಿದ್ದವು.

### ವಿದೇಶಿ ಶಾಖೆ

ಭಾರತೀಯ ಸ್ಟೇಟ್ ಬ್ಯಾಂಕು ಅರ್ಟೇಸಿಯಾ, ಸದರನ್ ಕ್ಯಾಲಿಫೋರ್ನಿಯಾ, ಯು ಎಸ್ ಎ ಯಲ್ಲಿ ತನ್ನ ಹೊಸ ಶಾಖೆಯೊಂದನ್ನು ತೆರೆದಿದೆ.

## ವಟಾವಣೆ ಗೃಹ

ಭಾರತದ ವಟಾವಣೆ ಹಾಗೂ ಹಣಕಾಸು ಗೃಹ ಪರಿಮಿತ ಕಂಪನಿ ಅಧಿನಿಯಮದ ಅಡಿಯಲ್ಲಿ ನೊಂದಾಯಿಸಲ್ಪಟ್ಟು ಕಾರ್ಯ ಪ್ರಾರಂಭಿಸಿದೆ. ಹಣ ಮಾರುಕಟ್ಟೆ ಕಿರು ಅವಧಿಯ ದ್ರವತ್ವ ಅಸಮತೆಗಳನ್ನು ನಿವಾರಿಸಲು ರಿಸರ್ವ್ ಬ್ಯಾಂಕ್, ವಾಣಿಜ್ಯ ಬ್ಯಾಂಕುಗಳು, ಹಣಕಾಸು ಸಂಸ್ಥೆಗಳಿಂದ ಪ್ರವರ್ತಿತವಾದ ಈ ಸಂಸ್ಥೆ ವಟಾವಣೆ, ಮರುವಟಾವಣೆ, ಮಾರುಕಟ್ಟೆ ಪ್ರತಿಭೂತಿಗಳ ಮಾರುವಿಕೆ ಹಾಗೂ ಕೊಳ್ಳುವಿಕೆ, ವಾಣಿಜ್ಯ ಹುಂಡಿ, ವಾಣಿಜ್ಯ ಪತ್ರ, ವ್ಯಾಪಾರಿ ಹುಂಡಿಗಳಲ್ಲಿ ವಹಿವಾಟು ನಡೆಸುವುದು.

## ಕಾಲಿಗ್ರ ಚೆಕ್ಕು

2 ಮೇ 1988ರಿಂದ ಬೊಂಬಾಯಿ ಹಾಗೂ ಮದರಾಸಿನ ತೀರುವೆ ಮನೆಗಳಲ್ಲಿ ಕಾಲಿಗ್ರ ಚೆಕ್ಕುಗಳಿಗೆ ಮಾತ್ರ ಪ್ರವೇಶ. ಮಾಮೂಲಿ ಚೆಕ್ಕುಗಳನ್ನು ಬ್ಯಾಂಕುಗಳು ವಸೂಲಾತಿಗಾಗಿ ಸ್ವೀಕರಿಸುವುವಾದರೂ ಅವುಗಳನ್ನು ತೀರುವೆ ಮನೆಯಲ್ಲಿ ಸಲ್ಲಿಸುವಂತಿಲ್ಲ. ಬ್ಯಾಂಕುಗಳಿಗೆ ನೇರವಾಗಿ ಸಲ್ಲಿಸಿ ಪಾವತಿ ಪಡೆಯಬೇಕು. ಎಲ್ಲ ಗ್ರಾಹಕರು ತಮ್ಮಲ್ಲಿರುವ ಮಾಮೂಲಿ ಚೆಕ್‌ಗಳನ್ನು ಹಿಂತಿರುಗಿಸಿ ಕಾಲಿಗ್ರ ಚೆಕ್‌ಗಳನ್ನು ಪಡೆಯುವುದು ಸೂಕ್ತ

## ವಿಮಾ ರಕ್ಷೆ

ಸರ್ವಾಂಗೀಣ ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾನುಭವಿಗಳಿಗೆ ಭಾರತೀಯ ಜೀವ ವಿಮಾ ನಿಗಮ ವಿಮಾ ರಕ್ಷೆ ನೀಡಿದೆ. 19ರಿಂದ 60ರ ವಯೋಮಿತಿಯಲ್ಲಿರುವ 40 ಲಕ್ಷ ಫಲಾನುಭವಿಗಳಿಗೆ ಇದರಿಂದ ಪ್ರಯೋಜನ ದೊರೆಯುವುದು. ಮೃತರ ಕುಟುಂಬಕ್ಕೆ ರೂ 3,000ದಿಂದ 6,000ದ ವರೆಗೆ ಪರಿಹಾರ ದೊರಕುವುದು.



## ತಂದೆಯ ಹೆಸರು

ನಾನು ಹೊನ್ನಾಳಿ ಶಾಖೆಯಲ್ಲಿ ಕೆಲಸ ಮಾಡುತ್ತಿರುವಾಗ ನಡೆದ ಸಂಗತಿ. ನಮ್ಮ ಶಾಖೆಯನ್ನು ಹೊಸ ಕಟ್ಟಡಕ್ಕೆ ವರ್ಗಾಯಿಸುವ ಸಮಯದಲ್ಲಿ ಒಂದು ಸಮಾರಂಭವನ್ನು ಇಟ್ಟುಕೊಂಡಿದ್ದೆವು. ಸಮಾರಂಭಕ್ಕೆ ವಲಯಾಧಿಕಾರಿಗಳು ಬರುವವರಿದ್ದರು. ಅವರು ಇದೇ ಸಮಾರಂಭದಲ್ಲಿ ಕೆಲವು ಎಸ್. ಎಸ್. ಡಿ. ಎ. ಸಾಲಗಳನ್ನು ವಿತರಣೆ ಮಾಡುವ ಏರ್ಪಾಡು ಮಾಡಲು ನಮ್ಮ ಶಾಖಾಧಿಕಾರಿಗಳನ್ನು ಕೇಳಿದ್ದರು. ಸರಿ ಈ ಸಾಲದ ಅರ್ಜಿ ವಗೈರೆಗಳನ್ನು ತೆಗೆದುಕೊಳ್ಳುವ ಜವಾಬ್ದಾರಿ ನನ್ನ ಪಾಲಾಯ್ತು. ಬಂದಿದ್ದ ಇಪ್ಪತ್ತೆರಡು ಮಂದಿಗಳಿಂದ ಅರ್ಜಿಯನ್ನು ಭರ್ತಿ ಮಾಡತೊಡಗಿದೆ. ಸುಮಾರು ಹತ್ತು ಅರ್ಜಿಗಳನ್ನು ಮುಗಿಸಿದ್ದೆ. ಆಗ ನಡೆದ ಘಟನೆ ಇದು :

"ಏನಪ್ಪ ನಿನ್ನ ಹೆಸರು ?" ನಾನು ಕೇಳಿದೆ.

"ರಂಗಾನಾಯ್ಕ ಬುದ್ಧಿ." ಅವನು ಹೇಳಿದ.

"ನಿನ್ನ ತಂದೆಯ ಹೆಸರೇನು ?"

"ಅಯ್! ಇಲ್ಕಣ್‌ಬುದ್ಧಿ."

"ಇಲ್ದೇ ಇದ್ರೂ ಪರ್ವಾಗಿಲ್ಲ. ಅವರ ಹೆಸರೇನು ?"

"ತಂದೇವ್ರು ಇಲ್ಲಾ ಅಂತೀನಿ."

ನನಗೆ ಕೋಪವೇರತೊಡಗಿತು, "ಅಲ್ಲ ಕಣಯ್ಯ, ತಂದೆ ಹೆಸರು ಹೇಳು ಅಂದ್ರೆ ಇಲ್ಲಾ ಅಂತಿಯಲ್ಲಾ, ಮತ್ತೆ ಇನ್ನಾರಿಗೆ ಹುಟ್ಟಿದ್ದೆ ನೀನು ?"

"ಅದೇ ಗೊತ್ತಿಲ್ಲ ಬುದ್ಧಿ. ನಮ್ಮವ್ವ ದ್ಯಾವ್ರಿಗೆ ಬಿಟ್ಟಿದ್ರಂತೆ. ನಾನು ಯಾರಿಗೆ ಹುಟ್ಟಿದ್ನೋ ತಿಳೀವಲ್ದು ಬುದ್ಧಿ' ಎಂದು ಆತ ಮುಗ್ಧತೆಯಿಂದ, ನೈಜವಾಗಿ ಹೇಳಿದಾಗ ನನಗೆ ನಗುವುದೋ ಅಳುವುದೋ ತಿಳಿಯದಾಯ್ತು.

**ಬ. ರಾ. ಸುರೇಂದ್ರ**
ಮೈಸೂರು ಬ್ಯಾಂಕ್
ಮೈಸೂರು ಶಾಖೆ

R. N. 36702/83



PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1